ಾದಲ್ನುಡಿ
ಗ್ರಂಥಮಾಲೆ



ಕಾದಂಬರಿ

# ಸನ್ಯಾಸಿಯು ಸೋಗಿನಲ್ಲಿ

೧

ಯುರಪ್ರಪಂಚ
ಉಡುಪಿ

ತೊದಲ್ನುಡಿ ಗ್ರಂಥಮಾಲೆ—ನುಡಿ ೧೧.

# ಸನ್ಯಾಸಿಯ ಸೋಗಿನಲ್ಲಿ

(ಸಾಮಾಜಿಕ ಕಾದಂಬರಿ)



ಕೆ. ಕೆ. ಶೆಟ್ಟಿ



ಕಿರಿಯರ ಪ್ರಪಂಚ
ಉಡುಪಿ

೦ ೮ ೦

# ಮುನ್ನುಡಿ

## ಪಂಡಿತ ತಾರಾನಾಥರಾಯರಿಂದ

ಪುಸ್ತಕಗಳಲ್ಲಿ ಮೋಹಗೊಳಿಸುವ ಶಕ್ತಿ
ಯೊಂದೇ ಅಲ್ಲ, ಎಚ್ಚರಗೊಳಿಸುವ
ಶಕ್ತಿಯೂ ಇರಬೇಕು. ಯೋಗ್ಯ
ಪುಸ್ತಕವು ಎಚ್ಚರಕೊಡುವಂತೆ ಮೋ
ಹಿಸಬೇಕು; ಅಥವಾ ತನ್ನ ಮೋಹ
ಜಾಲದಲ್ಲಿ ಹಿಡಿದು ಎಚ್ಚರಗೊಳಿಸ
ಬೇಕು. ಮಠದ ಹೊರಗಿನ ಶವಗಳೇ
ಮಠದ ಒಳಗಿನ ಶಿವಾನಂದನಿಗೆ ಆ
ಧಾರ. ಮತ್ತು ಕೈಲಾಗದ ಶಿಷ್ಯ
ರಿಗೆ ಬೈಲಾಟದ ಗುರುಗಳೇ ಗತಿ!

ಕಥಾಕಾದಂಬರಿಗಳು ಹಿಂದೆ ನಮ್ಮಲ್ಲಿ ಸಾಧಾರಣವಾಗಿ ವಾಜೀಕರಣ ಪ್ರಯೋಗಗಳಾಗಿದ್ದವು. ಇಂದೂ ಅಂಥವೆಷ್ಟೋ ಇವೆ. ಆದರೆ ಕಥೆಯನ್ನು ಬರೆಯುವುದರ ಉದ್ದೇಶವು ಬರೇ ಕಾಮೋನ್ಮಾದವನ್ನು ರೇಗಿಸುವುದು 'ಎಂದು ಯಾವ ವಿಚಾರ ಶೀಲರೂ ಒಪ್ಪಲಿಕ್ಕಿಲ್ಲ. ಅಂಥಾ ಕಥಾಪುಸ್ತಕಗಳು ಬಿಸಿ ಬಿಸಿ ದೋಸೆಯಂತೆ ಮಾರಾಟವಾಗುತ್ತವೆಂಬುದು ನಿಜ. ಆದರೆ ಸಂತೆಯ ರೀತಿಯೇ ಬೇರೆ. ಸಾಹಿತ್ಯದ ನೀತಿಯೇ ಬೇರೆ.

ಬರಹದಲ್ಲಿ ಆಕರ್ಷಣವಿರಬೇಕಲ್ಲವೆ? ಎಂದು ಯಾರಾದರೂ ಕೇಳಬಹುದು. ಅದಕ್ಕೊಂದು ಪ್ರಶ್ನೆ. ಆಕರ್ಷಣವೊಂದೇ ಧ್ಯೇಯವಾದ ಪಕ್ಷಕ್ಕೆ ಅದನ್ನು ಅಸ್ಥಿಮಾಂಸಪ್ರಪಂಚದಲ್ಲಿಯೇ ವಾಸ್ತವಿಕವಾಗಿ ಅನುಭವಿಸಬಹುದಷ್ಟೆ? ವಸ್ತುವಿಷಯವನ್ನೂ ಪುಸ್ತಕಕ್ಕೊಯ್ಯುವುದಕ್ಕಿಂತ ವಸ್ತುವಿನಲ್ಲೇ ಭೋಗಿಸಿ ಸುಖಿಸುವುದುತ್ತಮವಲ್ಲವೆ?

ಸಂತೆಯ ಕಥೆಗಳು ನಿತ್ಯಜೀವನದಲ್ಲಿರುವ ಅಭಾವವನ್ನು ಪೂರೈಸುವ ಪ್ರಯತ್ನಗಳಾಗಿರುವದೂ ಉಂಟು. ಮನೆಯಲ್ಲಿಲ್ಲದ್ದನ್ನು ಮನಸ್ಸಿನಲ್ಲಿಟ್ಟುಕೊಂಡು ರಮಿಸುವ ಹಾದಿ ಅದು. ಆ ಹಾದಿಯಲ್ಲಿ ಅಂಥ ಅಭಾವದ ಪೂರೈಕೆ ಎಷ್ಟರ ಮಟ್ಟಿಗೆ ಆಗುತ್ತದೋ, ಅಷ್ಟರ ಮಟ್ಟಿಗೇ ಅದಕ್ಕೆ ಪ್ರೋತ್ಸಾಹವೂ ದೊರೆಯುವದುಂಟು; ಮತ್ತು ಅಂಥಾ ಪೂರೈಕೆಯನ್ನೂ ಕೋರುವವರೇ ಹೆಚ್ಚುಮಂದಿ ಇರುವುದರಿಂದ ಅಂಥಾ ಪುಸ್ತಕಗಳಿಗೂ ಸಂತೆ ಬೀದಿಯಲ್ಲಿ ಹೆಚ್ಚಿನ ಪ್ರೋತ್ಸಾಹವಿದೆ. ಆದರೆ ಸಂತೆಯ ಅಳತೆ ಕೋಲನ್ನು ಸಾಹಿತ್ಯದ ಸಾಮಗ್ರಿಗಳಿಗೆ ಹಚ್ಚಿನೋಡುವುದು ನ್ಯಾಯವಲ್ಲವಷ್ಟೆ? ಹೀಗಿರುವಾಗ, ಹೆಚ್ಚು ಮಾರಾಟವಾಗುವ ಕಥಾಪುಸ್ತಕವು ಹೆಚ್ಚುಯೋಗ್ಯವಾಗಿಯೂ ಇದೆ ಎಂಬ ಮಾತಿಗೆ ವಿವೇಚನೆಯು ಸಹಿ ಹಾಕುವುದಿಲ್ಲ.

ಸಂಸಾರದ ಸಂಗತಿಯು ಪುಸ್ತಕದ ಪುಟಗಳನ್ನು ಸೇರಬೇಕಾದರೆ ಅದು ಪುಸ್ತಕರಚನೆಯ ತತ್ವಗಳನ್ನೊಳಗೊಂಡಿರ

ಬೇಕು. ಕಥಾಕಾದಂಬರಿ ನಾಟಕಗಳು ಸಮಾಜ ಸಂಸಾರ ಗಳ ನಿತ್ಯಜೀವನದ ರೂಪವೊಂದನ್ನೇ ಅಲ್ಲದೆ, ಅವುಗಳ ಅಂತ ರಾಳವನ್ನೂ ಹೊಳೆಸುವವಾಗಿರಬೇಕು. ಯಾಕೆಂದರೆ ಜೀವ ನದ ಆಧಾರ ಉತ್ತೇಜಕಗಳು ಇರುವದು ಆ ಅಂತರಾಳದಲ್ಲಿಯೇ ಪರಿಸ್ಥಿತಿಯಲ್ಲಿಯೇ. ಸಾಮಾನ್ಯ ಮನುಷ್ಯನು ಇವುಗಳ ಕೈಯ್ಯ ಲ್ಲೊಂದು ಬರೇ ಸೂತ್ರದ ಗೊಂಬೆಯೇ. ಆತನು ಪೂರ್ಣ ಸ್ವತಂತ್ರನಲ್ಲ.

ಆದರೂ ಪರಿಸ್ಥಿತಿಯನ್ನು ಇದುರಿಸಬಲ್ಲ; ಹೊಸಪರಿಸ್ಥಿತಿ ಯನ್ನು ರಚಿಸಬಲ್ಲ; ಆ ಅಂತರಾಳವನ್ನು ಕೆಣಕಬಲ್ಲ; ಅದನ್ನು ಸುಧಾರಿಸಬಲ್ಲ; ಎಂಬ ಧರ್ಮಶಾಸ್ತ್ರಗಳ ಮಾತೂ ನಿಜವೇ. ಅದಕ್ಕೆ ಹಲವು ಸಾಧು ಸತ್ಪುರುಷರ ನಿರ್ಮಲ ಜೀವನವೂ ಪ್ರತ್ಯಕ್ಷ ಪ್ರಮಾಣವಾಗಿದೆ. ಆದರೆ ತನ್ನ ಪರಿಸ್ಥಿತಿಯೇ ತನ್ನ ವೈರಿಯಾಗಿದೆ ಎಂಬುದರ ಎಚ್ಚರಿಕೆ ಉಂಟಾದ ಮೇಲಲ್ಲವೆ ಅವನದಕ್ಕೆ ಇದಿರಾಗಿ ಅದನ್ನು ಬಹು ಜನರ ಹಿತಕ್ಕಾಗಿ ಅನು ಕೂಲಪಡಿಸಿಕೊಳ್ಳಬೇಕು, ಅಥವಾ ಸ್ವಹಿತಕ್ಕಾಗಿಯಾದರೂ ಅದನ್ನು ಮೀರಿ ತೇಲಿಕೊಳ್ಳಬೇಕು? ಆದುದರಿಂದ **ಎಚ್ಚರಿಕೆ ಇದೇ ಸುಧಾರಣೆಯ ಮೂಲ.** ಹೀಗಿರುವಾಗ ಎಚ್ಚರಿಕೆ ಯನ್ನುಂಟುಮಾಡದ ಪುಸ್ತಕಗಳು ಬುದ್ಧಿಯ ವ್ಯಭಿಚಾರದ ಸಾಕ್ಷ್ಯಗಳೇ ಎನ್ನಬಹುದಲ್ಲವೆ?

ಈಗ, ಪುಸ್ತಕಗಳಲ್ಲಿ ಮೋಹಗೊಳಿಸುವ ಶಕ್ತಿಯೊಂದೇ ಅಲ್ಲ, ಎಚ್ಚರಗೊಳಿಸುವ ಶಕ್ತಿಯೂ ಇರಬೇಕು ಎಂದಾಯಿ ತಲ್ಲವೆ? **ಯೋಗ್ಯ ಪುಸ್ತಕವು ಎಚ್ಚರ ಕೊಡುವಂತೆ ಮೋಹಿ ಸಬೇಕು; ಅಥವಾ ತನ್ನ ಮೋಹಜಾಲದಲ್ಲಿ ಹಿಡಿದು ಎಚ್ಚರಗೊಳಿಸಬೇಕು.**

ಆದರೆ ಎಚ್ಚರಿಕೆಯೊಂದೇ ಸಾಲದು. ಅಷ್ಟೇ ಅಲ್ಲದೆ, ಒಬ್ಬಿಬ್ಬರ ಎಚ್ಚರಿಕೆಯಿಂದ ಮಾತ್ರ ಸಮಾಜವು ಮಾರ್ಪಡ ಲಿಕ್ಕಿಲ್ಲ ಎಂಬುದಕ್ಕೆ ಶಿವಾನಂದನ ಎಚ್ಚರಿಕೆಯೇ ಸಾಕ್ಷಿ.

ಆತನು ಎಚ್ಚರವಾಗಿಯೇ ಇದ್ದಾನೆ. ಆದರೂ ಯಂತ್ರವತ್ ತನ್ನಲ್ಲಿ ದುಷ್ಟ ಲೀಲೆಗಳನ್ನೂ ನಡೆಸುತ್ತಿದ್ದಾನೆ. ಅವನಿಗೆ ತನ್ನಿಂದಾಗುತ್ತಿರುವ ಅನಾಹುತಗಳೆಲ್ಲ ಗೊತ್ತು. ಆದರೂ ರೂಢಿಯಿಂದ ಬಂದ ಪರಿಸ್ಥಿತಿಯು ಅವನ ಮೇಲೇರಿ ಕೂತು ಬಿಟ್ಟದೆ. ಅದನ್ನು ಅವನು ಕಿತ್ತೊಗೆದು ಸ್ವತಂತ್ರನಾಗಲಾರ. ಅವನ ಎಚ್ಚರಿಕೆಯಲ್ಲಿ ಲೋಪವಿಲ್ಲ. ಆದರೆ ಅದಕ್ಕೆ ತಕ್ಕಂತೆಯೇ ವರ್ತಿಸಲಿಕ್ಕೆ ಅವನಲ್ಲಿ ಸಾಕಷ್ಟು ಮನೋಬಲ ಇಚ್ಛಾಶಕ್ತಿಗಳಿಲ್ಲ. ಸಮಾಜರೂಢಿಗಳೇ ತನ್ನನ್ನು ಹಾಗೆ ಮಾಡಿಟ್ಟವೆ ಎಂಬುದು ಅವನಿಗೆ ಗೊತ್ತು. ಆದರೆ ಅವುಗಳ ಹಿಡಿತದಿಂದ ಬಿಡಿಸಿಕೊಳ್ಳಲಾರ. ಇಷ್ಟು ಎಚ್ಚರಿಕೆಯಾದರೂ ಉಳ್ಳ ಸ್ವಾಮಿಗಳೇ ಆಗಲಿ, ಭಕ್ತರೇ ಆಗಲಿ, ನಮ್ಮಲ್ಲೆಷ್ಟು ಮಂದಿ ಇದ್ದಾರೆ? ಲಲಿತೆಯು, ಪಾಪ, ಅಂಥಾ ಲಕ್ಷೋಪಲಕ್ಷ ಬಡ ಜೀವಿಗಳ ಪ್ರತಿನಿಧಿ. ಅಂಥವರ ಗೋಳನ್ನು ನಿರ್ಮೂಲಗೊಳಿಸಲಿಕ್ಕೆ ಶಿವಾನಂದನ ಎಚ್ಚರಿಕೆ ಒಂದೇ ಸಾಲದು. ಯಾಕೆಂದರೆ ಆತನ ಕ್ಲೈಬ್ಯವು ಆತನ ಎಚ್ಚರಿಕೆಯನ್ನೂ ಹೂತುಹಾಕಿದೆ. ನಮ್ಮಲ್ಲಿ ಅಂಥಾ ಎಚ್ಚರಿಕೆಯ ಬಾಯಾಡಿಗಳು ಎಷ್ಟು ಜನರಿಲ್ಲ! ಮಾತು ಮಾರುದ್ದ, ಕೆಲಸಕ್ಕೆ ಕಾಲುದ್ದ!! ಮಠದ ಹೊರಗಿನ ಶವಗಳೇ ಮಠದ ಒಳಗಿನ ಶಿವಾನಂದನಿಗೆ ಆಧಾರ. ಮತ್ತು ಕೈಲಾಗದ ಶಿಷ್ಯರಿಗೆ ಬೈಲಾಟದ ಗುರುಗಳೇ ಗತಿ! ಈ ಅವಸ್ಥೆಯನ್ನು ಮಾಡಿದವರಾರು, ತಿದ್ದುವವರಾರು? ಇದನ್ನು ಈ ಕಾದಂಬರೀ ದರ್ಪಣವು ಹೊಳೆಸುವ ಸಮಾಜ ಪ್ರತಿಬಿಂಬವು ವಾಚಕರ ಎದೆ ಹೊಕ್ಕು ಉತ್ತರಿಸಲಿ.

ಪ್ರೇಮವಿದ್ಯಾಪೀಠ, ತುಂಗಭದ್ರಾ.
14—10—1937

ತಾರಾನಾಥ

# ಪ್ರಕಾಶಕರ ನುಡಿ

ಬೌದ್ಧ ಧರ್ಮವು ಉದ್ಭವವಾಗುವ ವರೆಗೆ ಸನ್ಯಾಸವು ಈಗಿನಷ್ಟು ಪ್ರಚುರ ವಾಗಿರಲಿಲ್ಲವೆಂದು ತೋರುತ್ತದೆ. ಪ್ರಾಯಶಃ ಹಿಂದೂಸ್ಥಾನದಲ್ಲಿ ಧರ್ಮ ಪ್ರಚಾರಮಾಡುವ ಪದ್ಧತಿಯೂ ಆಗಲೇ ಉಂಟಾಯಿತೆನ್ನಬಹುದು. ಬೌದ್ಧ ಧರ್ಮದ ಬೆನ್ನುಗಡೆಯಿಂದ ಅದರ ಪ್ರಕಾರಾಂತರವಾದ ಬೇರೆ ಧರ್ಮಗಳೂ ತದ್ವಿರುದ್ಧವಾದ ವೈದಿಕ ಧರ್ಮಗಳೂ ತಲೆಯೆತ್ತಿದರೂ ಧರ್ಮವನ್ನು ಹಾಗೂ ತತ್ವಗಳನ್ನು ಜನಸಾಮಾನ್ಯರಲ್ಲಿ ಪ್ರಚಾರಮಾಡುವ ಮಟ್ಟಿಗೆ ಬೌದ್ಧಧರ್ಮದ ಪದ್ಧತಿಯನ್ನೇ ಅನುಸರಿಸಿದವು.

ಧರ್ಮವನ್ನು ಪ್ರಚಾರಮಾಡಲು ಧರ್ಮಪ್ರವರ್ತಕರು ದೇಶವಿದೇಶ ಗಳಲ್ಲಿ ಸಂಚಾರಮಾಡಬೇಕಾಗಿ ಬಂತು. ನವೀನವಾದ ಒಂದು ಧರ್ಮವನ್ನು ಉನ್ನತಿಗೆ ತರುವ ಕಾರ್ಯವು ಕಂಟಕವಿಹೀನವಾಗಿದ್ದಿಲ್ಲ. ಹೀಗಾಗಿ ಆ ಕೆಲಸಕ್ಕೆ ಕೈಹಚ್ಚುವವರು ಎಂತಹ ಭಯಂಕರ ಪರಿಸ್ಥಿತಿಗಳನ್ನು ಎದುರಿಸ ಬೇಕಾಗುವುದೆಂದು ಹೇಳಲಾಸಲ್ಲ. ಅಂಥವರು ಹೆಂಡತಿ-ಮಕ್ಕಳು; ಮನೆ-ಬದುಕು; ಸಂಸಾರ-ಪರಿವಾರ ಇವುಗಳೊಡನೆ ಸಂಬಂಧವಿಟ್ಟುಕೊಳ್ಳುವುದಕ್ಕೆ ಶಕ್ಯವಿಲ್ಲ. ಅದಕ್ಕಾಗಿ ಅವರು ಸರ್ವ ಸಂಸಾರವನ್ನೇ ತೊರೆದು ತಮ್ಮ ತತ್ವಗಳ ಪ್ರಚಾರವನ್ನು ಕೈಕೊಳ್ಳುತ್ತಿದ್ದರು. ಅಂಥವರು ಸನ್ಯಾಸ ದೀಕ್ಷೆಯನ್ನು ತೆಗೆದು ಕೊಂಡು ತಮ್ಮ ತತ್ವಗಳಿಗಾಗಿಯೇ ಜೀವನವನ್ನು ಧಾರೆಯೆರೆದು ಕೊಡು ತ್ತಿದ್ದರು. ಬೌದ್ಧರ ಈ ರೀತಿಯನ್ನೇ ಜೈನರೂ, ಅನಂತರ ಶಂಕರಾಚಾರ್ಯರೇ ಮೊದಲಾದ ವೈದಿಕ ಧರ್ಮಾಚಾರ್ಯರೂ ಅವರ ಅನುಯಾಯಿಗಳೂ ಅನು ಸರಿಸಿದರು. ಇವರು ತಮ್ಮ ತತ್ವಗಳ ಪ್ರಚಾರಕ್ಕಾಗಿ ತಮ್ಮಂತಹ ಸನ್ಯಾಸಿಗಳ ಅಂದರೆ ತ್ಯಾಗಿಗಳ ಪೀಳಿಗೆಯನ್ನು ಸೃಜಿಸಿಹೋದರು. ಜೀವನದ ಅನಿ ವಾರ್ಯ ಆವಶ್ಯಕತೆಗಳನ್ನು (ಎಂದರೆ ಅನ್ನವಸ್ತ್ರಗಳನ್ನು) ಇವರು ದಾನಿ ಗಳಿಂದ ಪಡೆದು ಉಳಿದ ಐಶ್ವರ್ಯಗಳ ಗೊಡವೆಗೆ ಹೋಗದೆ ಒತ್ತರದಿಂದ ಪ್ರಚಾರ ಕಾರ್ಯವನ್ನು ನಡೆಸುತ್ತಾ ಬಂದರು.

ದಿನ ಹೋದಂತೆ ಆಯಾ ಧರ್ಮಗಳು ರೂಢಮೂಲವಾಗಿ ಪ್ರಚಾರಕರಿಗೆ ಅಷ್ಟೊಂದು ತೊಡಕುಗಳಿಲ್ಲದಾಗಲು, ಈ ಸನ್ಯಾಸಿಗಳ ಇಲ್ಲವೆ ಭಿಕ್ಷು (ಬೇಡಿ

ತಿನ್ನುವವರ) ಗಳ ದೃಷ್ಟಿಯು ಸಾಂಸಾರಿಕ ಜೀವನದ ಸೌಖ್ಯಗಳ ಕಡೆಗೆ ನೈಸರ್ಗಿಕವಾಗಿ ಹರಿಯಿತು. ಇಷ್ಟು ಹೊತ್ತಿಗೆ ನವೀನ ಧರ್ಮದ ಬಿಸಿಲು ಕುಂದಿ ಪುನಃ ಜನರಲ್ಲಿ ಧರ್ಮಾಂಧತೆಯು ಒಡಮೂಡಿತು. ಧರ್ಮಾಂಧರಾದ ಸಾಮಾನ್ಯರಿಂದ 'ಸರ್ವತಂತ್ರ ಸ್ವತಂತ್ರ'ರಾದ ಈ 'ಪರಮ ಹಂಸ'ರು ಧರ್ಮ ಪ್ರಚಾರ ಸೌಕರ್ಯದ ನೆವನದಿಂದ ಹೇರಳ ದ್ರವ್ಯವನ್ನು ಪಡೆದುಕೊಂಡು ಮಠಾದಿಗಳನ್ನು ಸಮೃದ್ಧವಾಗಿ ಮಾಡಿದರು. ದ್ರವ್ಯವೊಂದು ದೊರತುದೇ ತಡ; ಸನ್ಯಾಸಿಗಳ ಅವಸ್ಥೆ ಸಂಸಾರಿಗಳಿಗಿಂತಲೂ ಕೀಳಾಯಿತು. ದ್ರವ್ಯ ಬಲದಿಂದ ಸಂಸಾರಿಗಳ ಸೌಖ್ಯಗಳೆಲ್ಲಾ ಸನ್ಯಾಸಿಗಳಿಗೆ ದೊರೆಯಬಲ್ಲುದು. ಸಂಸಾರಿಗಳ ಹಾಗೆ ಜವಾಬುದಾರಿಯು ಮಾತ್ರ ಇವರಿಗಿಲ್ಲ! ಇದರಿಂದ ಇವರಿಗೆ 'ಅರಸರ ಅಂಕೆಯಿಲ್ಲ, ದೈವದ ಕಾಟವಿಲ್ಲ' ಎಂಬಂತಾಯಿತು. ಸಂಸಾರಿಯಾದವನು ಎಷ್ಟೇ ಧನಾಢ್ಯನಿದ್ದರೂ ತನ್ನ ಸಂಸಾರದ ಸುಖ ದುಃಖಗಳಿಂದ ಅಭಿಹತನಾಗುತ್ತಾ ಇರುತ್ತಾನೆ. ಸನ್ಯಾಸಿಗಾದರೆ ಸಂಸಾರವೇ ಇಲ್ಲ. ಸಂಸಾರದ ಸುಖಗಳು ಎಲ್ಲಾ ಇವೆ. ಅದರಿಂದ ಅವನು ಮದಾಂಧನೂ ನಿರ್ಘೃಣನೂ ನಿರ್ಲಜ್ಜನೂ ಆಗಿದ್ದಾನೆ. ಹೀಗೆ ಸನ್ಯಾಸದ ಸಂಸ್ಥೆಯು ರಸಾತಲಕ್ಕಿಳಿದಿದೆ. ಈ ರಸಾತಲಗಾಮಿ ಸನ್ಯಾಸದ ಒಂದು ಚಿತ್ರವಿದು ಸನ್ಯಾಸಿಯ ಸೋಗಿನಲ್ಲಿ.

ಹಿಂದೂಸಮಾಜದಲ್ಲಿ ಮಾತ್ರವಲ್ಲ, ಇಡೀ ಜಗತ್ತಿನ ಸನ್ಯಾಸ ಸಂಸ್ಥೆಯೇ ಹೀಗೆ. ಅದಕ್ಕಾಗಿ ನಮ್ಮ ಸನ್ಯಾಸಿಗಳನ್ನು ದೂರುವುದು ಸರಿಯಲ್ಲ. ಒಂದೇ ಸನ್ಯಾಸ ಸಂಸ್ಥೆಯನ್ನೇ ನಿರ್ಮೂಲಿಸಬೇಕು; ಇಲ್ಲವೇ ಸನ್ಯಾಸಿಗಳನ್ನು ಮುಂಚಿನ ಹಾಗೆಯೇ ಭಿಕ್ಷುಗಳನ್ನಾಗಿ ಮಾಡಬೇಕು. ಸಮಾಜವು ಈ ಎರಡರಲ್ಲಿ ಒಂದನ್ನು ಆಯ್ದುಕೊಳ್ಳಬೇಕಾಗಿದೆ.

ಈ ಕತೆಯು ಮೊದಲು 'ನವಯುಗ'ದಲ್ಲಿ 'ಭಿಕಾರಿಣಿ' ಎಂಬ ಹೆಸರಿನಿಂದ ಪ್ರಕಟವಾಗಿದೆ. ವಾಚಕರು ಅದರ ಪ್ರತಿಗಳನ್ನು ಮತ್ತೆ ಕೋರಿದ್ದರಿಂದ ಪುಸ್ತಕರೂಪದಲ್ಲಿ ಈ ಹೊಸ ನಾಮಕರಣದಿಂದ ಪ್ರಕಟಿಸಿದ್ದೇವೆ. ಕನ್ನಡಿಗರು ನಮ್ಮ ಈ ವರೆಗಿನ ಪ್ರಕಟಣೆಗಳಂತೆ ಇದಕ್ಕೂ ಪ್ರೋತ್ಸಾಹಿಸಲು ಹಿಂದೆಗೆಯಲಾರರೆಂದು ನಂಬುತ್ತೇವೆ.

ಉಡುಪಿ,<br>23-10-37

ಪ್ರಕಾಶಕರು



ಗ್ರಂಥಕರ್ತರು

‘ನವಯುಗ’ ಸಂಪಾದಕರಿವರು. ಅತ್ಯುಗ್ರ ಸುಧಾರಕರು. ಕಾಂಗ್ರೆಸ್ ಸಮತಾವಾದಿ ಪಕ್ಷಕ್ಕೆ ಸೇರಿದವರು. ಮನಸ್ಸಿಗೆ ಹೊಳೆದುದನ್ನು ಮುಚ್ಚುಮರೆಯಿಲ್ಲದೆ ಹೇಳಿಬಿಡುವ ನಿರ್ಭೀತ ಸ್ವಭಾವಿಗಳು. ಯಾರ ಹಂಗು, ದಾಕ್ಷಿಣ್ಯಕ್ಕೂ ಒಳಗಾಗುವವರಲ್ಲ. ವ್ಯಭಿಚಾರಿಣಿ ಯಾರು? ಪುರುಷವಧು, ಹೆಂಡ್ತಿ ಗಂಡನಾದರೆ, ಸಂಶಯ ಪಿಶಾಚಿ ಮುಂತಾದ ನಾಟಕಗಳನ್ನು ಬರೆದಿದ್ದಾರೆ. ಅವೆಲ್ಲಾ ಜನ ಮೆಚ್ಚಿಗೆಯನ್ನು ಪಡೆದಿವೆ. ಈ ಕಾದಂಬರಿಯು ಅವರ ಒಂದು ಹೊಸ ಪ್ರಯತ್ನ. ಯಾವುದನ್ನೂ ನಿಯಮಬದ್ಧವಾಗಿ ಮಾಡಬೇಕೆಂಬುದು ಇವರ ಸ್ವಭಾವಕ್ಕೆ ವಿರುದ್ಧವಾದರೂ ಇವರದೇ ಒಂದು ಹಾದಿ ಇವರಿಗಿದೆ. ಒಮ್ಮೆ ಬರೆದುದನ್ನು ತಿರುಗಿ ನೋಡುವ ಪದ್ಧತಿ ಕೂಡ ಇವರಿಗಿರುವುದಿಲ್ಲವಾದರೂ ಬರೆದುದೆಲ್ಲಾ ಓದುವಂತಹುದೇ ಆಗಿರುವುದು ಇವರ ವೈಶಿಷ್ಟ್ಯ. ಈ ಕಾದಂಬರಿಯನ್ನು ಬರೆದುಕೊಟ್ಟುದಕ್ಕಾಗಿ ‘ಕಿರಿಯರ ಪ್ರಪಂಚ’ವು ಇವರಿಗೆ ಚಿರಋಣಿಯಾಗಿದೆ.



ಮುನ್ನುಡಿಕಾರರು

ದಕ್ಷಿಣ ಕನ್ನಡಿಗರಾದ ಇವರು ತುಂಗಭದ್ರೆಯಲ್ಲಿ 'ಪ್ರೇಮಾಯತನ'ವನ್ನು ಸ್ಥಾಪಿಸಿ ನಡೆಸುತ್ತಿದ್ದಾರೆ. ಇವರು ವಾಗ್ಮಿಗಳೂ, ಉತ್ತಮ ಬರಹಗಾರರೂ, ವಿಮರ್ಶಕರೂ, ಕಲಾವಿದರೂ, ಉಗ್ರ ಸುಧಾರಕರೂ ಆಗಿದ್ದಾರೆ. ಇವರ ಬರಹದಲ್ಲಿ, ಪ್ರತಿಯೊಂದು ವಾಕ್ಯದಲ್ಲಿ ಹೊಸ ಅಭಿಪ್ರಾಯ, ಹೊಸ ವಿಚಾರಗಳು ತುಂಬಿರುತ್ತವೆ. ಸಾಹಿತ್ಯದ ಪ್ರತಿಯೊಂದು ಭಾಗದಲ್ಲಿಯೂ ಇವರು ಪ್ರಸಿದ್ಧರಾಗಿದ್ದಾರೆ. ಎಷ್ಟೋ ಉತ್ತಮ ಕತೆಗಳನ್ನು ಬರೆದಿದ್ದಾರೆ. ಇವರ 'ಧರ್ಮಸಂಭವ'ವು ವಿಚಾರ ಕ್ರಾಂತಿ, ಸಮಾಜ ಕ್ರಾಂತಿಯನ್ನುಂಟುಮಾಡುವ ಉತ್ತಮ ಗ್ರಂಥ. ತಮ್ಮ ಕೆಲಸವನ್ನು ಒತ್ತಟ್ಟಿಗಿಟ್ಟು ನಮ್ಮ ಪ್ರಾರ್ಥನೆಯಂತೆ ಈ ಪುಸ್ತಕಕ್ಕೆ ಉತ್ತಮವಾದ ಮುನ್ನುಡಿ ಬರೆದುಕೊಟ್ಟುದಕ್ಕಾಗಿ ನಾವು ಇವರ ಉಪಕಾರವನ್ನು ಸ್ಮರಿಸುತ್ತೇವೆ.

# ಅಧ್ಯಾಯ ೧

## "ಅಮ್ಮಾ ನನ್ನನ್ನಾ ನರಕಕ್ಕೆಳೆಯಬೇಡ!"

ರಾತ್ರಿ ಸುಮಾರು ಒಂಭತ್ತು ಘಂಟೆ ಸಮಯ. ಶಿವಪುರದ ಕೋರ್ಟು ರಸ್ತೆಗೆ ತಾಗಿಕೊಂಡಿರುವ ಮಧ್ಯತರಗತಿಯ ಮನೆಯೊಂದರ ಕೋಣೆಯಲ್ಲಿ ಯೌವನದ ಹೊಸ್ತಿಲಿಗೆ ಕಾಲಿಡದೆ ಇನ್ನೂ ಬಾಲಿಕೆಯೇ ಆಗಿರುವ ಹುಡುಗಿಯೊಬ್ಬಳು ಕುರ್ಚಿಯಲ್ಲಿ ಕುಳಿತು ಮೇಜಿಯ ಮೇಲೆ ತಲೆ ಬಗ್ಗಿಸಿಟ್ಟು ಗಾಢ ಚಿಂತಾಕ್ರಾಂತಳಾಗಿ ಉಕ್ಕಿ ಉಕ್ಕಿ ಬರುವ ದುಃಖವನ್ನು ನಿಟ್ಟುಸಿರಿಂದಲೇ ನಿವಾರಿಸಲೆತ್ನಿಸುತ್ತಿದ್ದಳು. ಎಷ್ಟು ತಡೆದರೂ ನಿಲ್ಲಲೊಪ್ಪದೆ ಕಣ್ಣೀರು ಒಸರಿ ಬಂದು, ಟೇಬ್ಲ್ ಲೇಂಪಿನ ಸ್ವಚ್ಛ ಬೆಳ್ದಿಂಗಳೋಪಾದಿಯ ಬೆಳಕಿನಲ್ಲಿ ಬಾಲಿಕೆಯ ಮೃದುಗಲ್ಲಗಳ ತಳದಲ್ಲಿ ಒಂದು ಕ್ಷಣ ಬೆಳ್ಳಿಯ ಬಿಂದುಗಳಾಗಿ ಶೋಭಿಸಿ ಆ ಮೇಲೆ ಮೇಜಿಗೆ ಜಾರಿಬಿದ್ದು ಕೊನೆಹೊಂದುತ್ತಿತ್ತು. ಇಷ್ಟರಲ್ಲಿ, "ಲಲಿತಾ, ಮಲಗಬಾರದೇ? ಬೆಳಿಗ್ಗೆ ಬೇಗಎದ್ದು ಓದಿದರಾಗುವುದಿಲ್ಲವೇ?" ಎಂದು ಅಡಿಗೆ ಕೋಣೆಯ ಕಡೆಯಿಂದ ಬಂದ ಮಾತುಗಳು ಒಮ್ಮೆಯೇ ಬಾಲಿಕೆಯ ಚಿಂತಾಸರಣಿಯನ್ನು ತಡೆಗಟ್ಟಿಬಿಟ್ಟುವು. ಅವಳು ಅವಸರದಿಂದ ಕಣ್ಣುಗಳನ್ನು ಸೆರಗಿಂದೊರಸಿಕೊಂಡು, ಮೂಗಿಂದಿಳಿವ ನೀರನ್ನು ಕೈಬೆರಳುಗಳಿಂದೊತ್ತಿ ತೆಗೆದು ಒಂದೆಡೆಗೆಸೆದು, ಕೈಯ ಪುಸ್ತಕವನ್ನು ತೆರೆಯುವಷ್ಟರಲ್ಲಿ ಲೇಂಪಿನ ಬುರುಡೆಯು ಟಪ್ಪನೆ ಒಡೆದು ಮೇಲ್ಭಾಗವು ತುಂಡಾಗಿ ಬಿದ್ದು ದೀಪವು ಭಕ್ಕನೆ ದೊಡ್ಡದಾಯಿತು. ಲಲಿತೆಯು ಅದನ್ನೂದಿ ನೊಂದಿಸಿಬಿಟ್ಟಳು. ಕೂಡಲೆ ಅಡಿಗೆ ಮನೆಯಿಂದ ಪ್ರಾಯ ಮೀರಿದ ಸ್ತ್ರೀಯೊಬ್ಬಳು ಚಿಮುಣಿದೀಪ ಹಿಡಕೊಂಡು ಸರಸರನೆ ಲಲಿತೆಯ ಕೋಣೆಗೆ ಬಂದು, "ಏನೆ, ಏನಾಯಿತು ಲಲಿತ? ಮೊನ್ನೆತಾನೆ ತಂದ ಬುರುಡೆ ಇವತ್ತು ಒಡೆದುಹೋಯಿತೇ? ಎರಡು ದಿವಸಕ್ಕೊಂದು ಬುರುಡೆಗೆ ಎಲ್ಲಿಗೆ ಹೋಗುವುದು?" ಎಂದು ಧಡಕ್ಕನೆ ಚಿಮುಣಿಯನ್ನು ಮೇಜಿಯ ಮೇಲಿಟ್ಟು ಪರೀಕ್ಷಿಸುವಾಗ ಮೇಜಿಯ ಎದುರುಗಡೆಯ ಮೇಲ್ಭಾಗವು ಕಣ್ಣೀರಿಂದ ಒದ್ದೆಯಾಗಿರುವುದನ್ನು ಕಂಡು ತಳಮಳಗೊಂಡು

"ಏನೆ, ಇದು ಲಲಿತ? ಇಷ್ಟರವರೆಗೂ ನೀನು ಕಣ್ಣೀರಿಡುತ್ತಿದ್ದುದೇ?" ಎಂದು ಆತುರದಿಂದ ಕೇಳಿದಳು.

ಮೊದಲೇ ಲಲಿತೆಯ ಹೃದಯವು ದುಃಖದಿಂದ ತುಂಬಿ ಹೋಗಿತ್ತು. ಹೊಸ ಬುರುಡೆಯು ಒಡೆದು ಹೋದುದರಿಂದ ಚಿಂತೆಯೊಂದಿಗೆ ಭೀತಿಯೂ ಕೂಡಿ ಪೀಡಿಸಹತ್ತಿದುವು. ವಿಶೇಷವಾಗಿ ಅದೊಂದು ಅಶುಭಸೂಚನೆ; ತನ್ನ ಮುಂದಿನ ಜೀವನದ ಮುನ್ನೆರಳೆಂದು ಅವಳು ತಲ್ಲಣಗೊಂಡಳು. ದುಃಖದ ವೇಗವು ಹಿರಿದಾಯಿತು. ಲಲಿತೆಯ ಹೃದಯಾಂತರಾಳದಲ್ಲಿ ದೊಡ್ಡ ವಿಪ್ಲವವೆದ್ದಿತು. ಅವಳು ತುಸು ಹೊತ್ತು ಸ್ತ್ರೀ ಸಹಜ ಸ್ಥೈರಣೆಯಿಂದ ಎಲ್ಲವನ್ನೂ ಒತ್ತಿಟ್ಟು, ವಿಸ್ಮಿತ ಮುಖಮುದ್ರೆಯಿಂದ ತನ್ನನ್ನು ದಿಟ್ಟಿಸಿ ನೋಡುವ ತಾಯಿಯ ಮುಖವನ್ನೇ ಕಣ್ಣು ಕಣ್ಣುನೋಡುತ್ತಾ ನಿಂತು ಬಿಟ್ಟಳು.

"ಏನಿದು ಲಲಿತ? ಏನೆಂದು ಮನಬಿಚ್ಚಿ ಹೇಳಬಾರದೆ? ಹೀಗೇಕೆ ಕಣ್ಣೀರಿಟ್ಟು ಈ ಎಳೆ ಪ್ರಾಯದಲ್ಲೇ ನಿನ್ನೀ ಕೋಮಲ ದೇಹವನ್ನು ಕರಗಿಸಿ ಕೊಳ್ಳುವೆ? ಅಂತಹದೇನಾಗಿದೆ ನಿನಗೀಗ?" ಎಂಬ ತನ್ನ ತಾಯಿಯ ತುಸು ಬಿರುಸುಮಾತುಗಳು ಲಲಿತೆಯ ಕೋಮಲ ಹೃದಯಕ್ಕೆ ಚೆನ್ನಾಗಿ ನಾಟಿದುವು. ದುಃಖಾವೇಗವು ಅವಳನ್ನು ಸಂಪೂರ್ಣವಾಗಿ ವಶಮಾಡಿಕೊಂಡುಬಿಟ್ಟಿತು. "ಅಮ್ಮಾ ನನ್ನನ್ನಾ ನರಕಕ್ಕೆಳೆಯಬೇಡ!" ಎಂದು ಲಲಿತೆಯು ದೊಪ್ಪನೆ ತನ್ನ ತಾಯಿಯ ಕಾಲ ಮೇಲೆ ಬಿದ್ದು ಬಿಟ್ಟಳು.

ಮಗಳ ಈ ರೀತಿಯ ಗೋಳಿನಿಂದ ಸರ್ವಸಾಮಾನ್ಯ ಮಾತೆಯ ಒಡಲು ಕರಗಿ ನೀರಾಗುತ್ತಿತ್ತು. ಒಡನೆಯೇ ಅವಳು ಮಗಳನ್ನು ಹಿಡಿದೆತ್ತಿ ತಕ್ಕೈಸಿ ಸಂತೈಸಲೆತ್ನಿಸುತ್ತಿದ್ದಳು. ಆದರೆ ಲಲಿತೆಯ ತಾಯಿ ನಾಗಿಯು ಹಾಗೇನೂ ಮಾಡದೆ ಕ್ರುದ್ಧಳಾಗಿ ಕಾಲಡಿ ಬಿದ್ದಿರುವ ಮಗಳನ್ನು ಕಣ್ಣೆತ್ತಿ ಸಹ ನೋಡದೆ ದಡದಡನೆ ಅಡಿಗೆಕೋಣೆಗೆ ನಡೆದುಬಿಟ್ಟಳು. ಅದೇಕೆ? ಇಷ್ಟೊಂದು ಕಠಿಣ ಮನಸ್ಸೇ ಅವಳದು? ಒಬ್ಬಳೇ ಮಗಳಾದ ಲಲಿತೆಯ ಮೇಲೆ ಅವಳಿಗೆ ಪ್ರೀತಿಯಿಲ್ಲವೇ? ಯಾರಾದರೂ ಅತ್ಯಂತ ಕನಿಕರಪಡಬೇಕಾದ ಪರಿಸ್ಥಿತಿಯಲ್ಲಿ ಹಡೆದ ತಾಯಿ, ನಾಗಿಯು ಇಷ್ಟೊಂದು ನಿಷ್ಠುರಳಾಗಿ ನಡೆಯಲು ಕಾರಣವೇನು?

ಅದೊಂದು ವಿದ್ಯಮಾನವು ಅಡ್ಡಬರುವ ವರೆಗೆ ಲಲಿತೆಯು ನಾಗಿಯ ಪಂಚಪ್ರಾಣವಾಗಿದ್ದಳು. ಒಬ್ಬಳೇ ಮಗಳಾದ ಅವಳಿಗೆ ಒಂದಿಷ್ಟು ತಲೆ ನೋವಾದರೆ, ಸ್ವಲ್ಪವೇನಾದರೂ ನೆಗಡಿಯಾಯಿತೆಂದರೆ ನಾಗಿಯ ಪ್ರಾಣವೇ ಹಾರಿಹೋಗುವಂತಾಗುತ್ತಿತ್ತು. ಅವಳೆಲ್ಲಿಯಾದರೂ ಶಾಲೆಯಿಂದ ಬರುವುದು ತುಸು ವಿಳಂಬವಾದರೆ ನಾಗಿಗೆ ಕತ್ತುನೀಡಿ ಮಾರ್ಗದ ಬದಿ ನಿಂತು ಲಲಿತೆಯ ಬರವನ್ನು ಹಾರೈಸಿಕೊಂಡಿರುವುದೊಂದೇ ಕೆಲಸ. ಲಲಿತೆಯು ಎಷ್ಟು ತಿಂದರೂ ಎಷ್ಟು ಉಂಡರೂ ಸಾಲದವಳಿಗೆ. ಅವಳೇನು ಕೇಳಿದರೂ ನಾಗಿಯು ಏನಾದರೂಮಾಡಿ ತಂದುಕೊಡದೆ ಬಿಡಲಾರಳು. ತಾನು ಇಷ್ಟೊಂದು ಅಕ್ಕರೆಯಿಂದ ತನ್ನ ಪ್ರಾಣದ ಪ್ರಾಣವಾಗಿ ಸಾಕಿಕೊಂಡು ಬಂದ ತನ್ನ ಮಗಳು ಇನ್ನೂ ಎಳೆಯವಳಿರುವಾಗಲೆ ತನ್ನ ಮಾತು ಕೇಳಲಿಲ್ಲವೆಂದರೆ ಬೆಳೆದಾಗ ಕೇಳುವಳೇ? ತಾನು ಅವಳ ಹಿತಕ್ಕಾಗಿ ಪ್ರಾಣವನ್ನಾದರೂ ಅರ್ಪಿಸಲು ಸಿದ್ಧಳಿರುವಾಗ ಎಂದಾದರೂ ಅವಳಿಗೆ ಅಹಿತವಾಗುವ ಕೆಲಸಮಾಡುವೆನೇ? ಅವಳ ಹಿತವೇನೆಂದು ಇನ್ನೂ ಲೋಕಾನುಭವವಿಲ್ಲದ ಅವಳಿಗಿಂತಲೂ ತನಗೆ ಹೆಚ್ಚು ಗೊತ್ತಲ್ಲವೇ? ಅಂದ ಮೇಲೆ ಲಲಿತೆಯು ತಾನು ಹೇಳಿದಂತೆ ನಡೆಯದೆ ಅವಳ ಇಚ್ಛಾನುಸಾರ ನಡೆಯುವ ಛಲತೊಡುವುದೇ? ತನ್ನನ್ನಾ ನರಕಕ್ಕೆಳೆಯ ಬೇಡವ್ಮಾ ಎಂದು ತನ್ನ ಕಾಲಿಗೆ ಬಿದ್ದು ಬೇಡಿಕೊಳ್ಳುವುದೇ? ತಾಯಿಯಾದವಳಿಗೆ ಇದಕ್ಕಿಂತ ದೊಡ್ಡ ಅಪಮಾನವಿದೆಯೇ? ಎಂದು ನಾಗಿಯು ಆಗ್ರಹಕ್ಕೆ ಮನಸ್ಸುಕೊಟ್ಟು ತನ್ನ ಮಾತೃತ್ವವನ್ನು ಆ ಸಂದರ್ಭದಲ್ಲಿ ಮರೆತು ನಿರ್ದಯವಾಗಿ ವರ್ತಿಸಿದಳು. ತನ್ನದೇ ಅದೊಂದು ದೃಷ್ಟಿಯಿಂದ ಯಾವುದಾದರೊಂದು ಆಗ್ರಹಕ್ಕೆ ಬಲಿಬಿದ್ದಿರುವ ಅಸಂಸ್ಕೃತ ಮನಸ್ಸಿಗೆ ತನ್ನ ಹೊರತು ಇನ್ನೊಂದು ದೃಷ್ಟಿಯಿದೆಯೆಂದು ತಿಳಿಕೊಳ್ಳುವ ವಿವೇಕವಾದರೂ ಎಲ್ಲಿಂದ ಬರಬೇಕು? ಅದರಲ್ಲೂ ತಾನು ಅತ್ಯಂತ ಪ್ರೀತಿ ಮಮತೆಗಳಿಂದ ಲಾಲಿಸಿ ಪಾಲಿಸಿ ಬೆಳೆಸಿದ ವಸ್ತುವು ನನ್ನ ಕೈಗೊಂಬೆಯಾಗಿ ಕುಣಿಯದೆ ಸ್ವಲ್ಪ ಸ್ವತಂತ್ರ ತೋರಿಸಿದರೆ ಉಂಟಾಗುವ ಆಕ್ರೋಶದ ಪರಿಣಾಮವಾಗಿ ಹಡೆದೊಡಲೇ ಮಕ್ಕಳ ಬದ್ಧ ದ್ವೇಷಿಯಾಗುವುದಿಲ್ಲವೇ? ಒಡ ಹುಟ್ಟಿದವರೇ ಕಡು ವೈರಿಗಳಾಗುವುದಿಲ್ಲವೇ?

ತುಸು ಹೊತ್ತು ನಾಗಿಯೂ ಕ್ರೋಧವಶಳಾಗಿ ತನ್ನನ್ನು ತಾನೇ

ಮರೆತಿದ್ದಳು. ಆದರೆ ಅಡಿಗೆ ಕೋಣೆಗೆ ಕಾಲಿಟ್ಟೊಡನೆಯೇ ಅವಳ ಮಾತೃತ್ವವು, ಸಿಟ್ಟನ್ನು ಅಡಿಗೆ ಹಾಕಿ ಮೇಲೇರಿ ನಿಂತಿತು. ಒಮ್ಮೆಯೇ ಅವಳ ಕುತ್ತಿಗೆಯ ನರಗಳು ಬಿಗಿದವು. ಕಣ್ಣೀರು ತುಂಬಿ ಬಂತು "ಛೆ! ನಾನೇನು ಮಾಡಿದೆ?" ಎಂಬ ಮಾತೃ ಹೃದಯದ ಸಹಜ ಪಶ್ಚಾತ್ತಾಪವು ಅವಳ ಮನಸ್ಸನ್ನು ಕಡಿಯ ಹತ್ತಿತು. ಅವಳು ತುಸು ಹೊತ್ತು ಯೋಚಿಸಿದಳು. ಸಂತಾಪವು ಮತ್ತಷ್ಟು ಹೆಚ್ಚಿತು. ಕೂಡಲೇ ಕಣ್ಣೀರೊರಸಿಕೊಂಡು ಲಗುಬಗೆಯಿಂದ ಲಲಿತೆಯ ಕೋಣೆಗೆ ನಡೆದಳು. ಆಗ ಲಲಿತೆಯ ಮುಖವು ಕೆಂಪೇರಿದ್ದಿತು. ಅವಳು ಕೋಣೆಯ ಕಿಟಕಿಯಹೊರಗೆ ದಿಗಂತದತ್ತನೋಡುತ್ತಾ ಗಂಭೀರವಾಗಿ ಅದೇನೋ ಯೋಚನಾಮಗ್ನಳಾಗಿದ್ದಳು. ನಾಗಿಯು ಅವಳ ಹತ್ತಿರ ಹೋಗಿ ತುಸು ಹೊತ್ತು ಮೌನವಾಗಿ ನಿಂತುಬಿಟ್ಟಳು. ಚಿಮಣಿಯ ದೀಪವು ಬೆಳಕಿಗಿಂತ ಹೊಗೆಯನ್ನೇ ಹೆಚ್ಚಾಗಿ ಕೋಣೆಯೊಳಗೆ ತುಂಬುತ್ತಿತ್ತು. ಗಾಳಿಯು ಸಾಕಷ್ಟು ಬಲವಾಗಿ ಬೀಸುತ್ತಿದ್ದುದರಿಂದ ಚಿಮಣಿಯ ಬೆಳಕು ತೀವ್ರ ಅಸ್ಥಿರಚಿತ್ತನಂತೆ ತಲ್ಲಣಿಸುತ್ತಿತ್ತು. ಕೋಣೆಯೊಳಗೆ ಬೆಳಕು ಕತ್ತಲೆಗಳು ಜಟ್ಟಿ ಕಾಳಗ ನಡಿಸಿ ಒಂದನ್ನೊಂದು ಅಡಿಗೆ ಹಾಕುತ್ತಾ ಯಾವುದೂ ಸ್ಥಿರವಿಜಯ ಪಡೆಯದೆ ತತ್ತರಿಸುವಂತೆ ತೋರುತ್ತಿತ್ತು. ಲಲಿತೆಗೆ ಇದಾವುದರ ಗೊಡವೆಯೇ ಇಲ್ಲದಿದ್ದರೂ ಅವಳ ಮನಸ್ಸು ಇಂತಹದೇ ಆದ ತೀವ್ರ ದ್ವಂದ್ವದ ರಂಗಸ್ಥಳವಾಗಿತ್ತು. ತಾನು ಮಾತೆಯ ಹಠದಂತೆ ನಡೆದು ಈ ಎಳೆ ಪ್ರಾಯದಲ್ಲೇ ಮಾನಗೆಟ್ಟು ಶರೀರ ವಿಕ್ರಯಿಸಿ ವ್ಯಾಪಾರ ನಡಿಸುವ ಸೂಳೆಯಾಗುವುದೇ? ಅಥವಾ ತನ್ನ ಅಧ್ಯಾಪಕಿಯ ಬೋಧನೆಯಂತೆ ಸ್ಕೂಲು ಫೈನಲಿನ ವರೆಗೆ ಕಲಿತು ಅಧ್ಯಾಪಕಿ ಅಥವಾ ಮಿಡ್ ವೈಫ್ ಆಗುವುದೇ? ಇದರಲ್ಲಾವುದು ಒಳ್ಳೇದೆಂದು ನಿಶ್ಚೈಸುವುದರಲ್ಲೇನೂ ಕಷ್ಟವಿಲ್ಲ. ಅದೊಂದು ಸಮಸ್ಯೆಯೇ ಅಲ್ಲ. ಆದರೆ ನಾಗಿಯ ಛಲದಿಂದಾಗಿ, ತಾನು ಹುಟ್ಟಿ ಬೆಳೆದ ಪರಿಸ್ಥಿತಿಯಿಂದಾಗಿ ಲಲಿತೆಗೆ ಅದೊಂದು ದೊಡ್ಡ ಸಮಸ್ಯೆಯಾಗಿ ಬಿಟ್ಟದ್ದಿತು. ಲಲಿತೆಯು ಇನ್ನೂ ಎಳೆ ಬಾಲೆ. ನಳನಳಿಪ ಎಳೆಲತೆಯಂತಿದ್ದಿತು ಅವಳ ಕೋಮಲ ದೇಹ. ಪ್ರಕೃತಿಯು ಅವಳಲ್ಲಿ ಲಾವಣ್ಯದ ನಕಾಶೆಯನ್ನಷ್ಟೇ ಎಳೆದಿದ್ದಿತು. ಅದನ್ನಿನ್ನು ವಿವಿಧ ರೂಪರೇಖೆಗಳಿಂದ ಶೋಭಾಯಮಾನವಾಗಿ ಮಾಡುವ ಕೆಲಸ ಮುಂದೆ ನಡೆಯಬೇಕಾಗಿದ್ದಿತು, ಆದರೆ ದುರ್ದೈವದಿಂದ,

ಎಳೆಬಾಲೆಯಾದರೂ ಸಮಾಜದದೃಷ್ಟಿಯಲ್ಲಿ ಪರಿಪಕ್ವಳೆಂಬ ಶರೀರಮಾರ್ಪಾಟ ವನ್ನವಳು ಹೊಂದಿದ್ದಳು. ಆದುದರಿಂದ ಮೊದಲೇ ಕಣ್ಣುಹಾಕಿಕೊಂಡಿದ್ದ ಕಾಮುಕ ಜನರ ಕಾಟವು ಅವಳಿಗೆ ಆರಂಭವಾಗಿತ್ತು. ಕೆಲವರು ನಾಗಿಗೆ ಹಲವು ವಿಧದ ಆಶೆತೋರಿಸಿ ಅವಳನ್ನೊಲಿಸಿಕೊಳ್ಳಲೆತ್ನಿಸುತ್ತಿದ್ದರು. ಆದರೆ ನಾಗಿಯು ಯಾವುದಕ್ಕೂ ಕಿವಿಕೊಡದೆ "ನನ್ನ ಮಗಳು ಇನ್ನೂ ಎಳೆಯವಳು. ಕೆಲವು ವರ್ಷ ಹೋಗಬೇಕು. ಅವಳ ವಿದ್ಯಾಭ್ಯಾಸ ಮುಗಿಯಬೇಕು. ಅವಳನ್ನು ನಾನು ಯಾರಿಗಾದರೂ ಮದುವೆಮಾಡಿಕೊಡುತ್ತೇನೆ" ಎಂದೆಲ್ಲಾ ನೆವ ಹೇಳಿ ಹಿಂದೆ ಕಳುಹಿಸುತ್ತಿದ್ದಳು. ಆದರೆ ಅವಳೂ ಉಭಯ ಸಂಕಟ ದಲ್ಲಿ ಬೀಳುವ ಪರಿಸ್ಥಿತಿಯೊಂದುಂಟಾಯಿತು. ಆಗ ತನ್ನ ದೃಷ್ಟಿಯಲ್ಲಿ ಚೆನ್ನಾಗಿ ವಿಚಾರಿಸಿ ಲಲಿತೆಯ ಭಾಗ್ಯೋದಯವಾಗುವ ಸಂದರ್ಭವೆಂಬ ದುರಾ ಶೆಗೆ ಬಲಿಬಿದ್ದು ಮಾತು ಕೊಟ್ಟುಬಿಟ್ಟಳು. ನಾಗಿಯಂಥವಳಿಗದು ಬಡವನಿಗೆ ನಿಧಿ ದೊರೆಕಂತಾಗಿದ್ದಿತು. ಲಲಿತೆಯ ಕುರಿತಾದ ಅವಳ ಅನುದಿನದ ಚಿಂತನೆಯು ಅನಾಯಾಸವಾಗಿ ನೆರವೇರುವಂತಾಗುವಾಗ ಅವಳೇನು ಮಾಡಿ ಯಾಳು ಮತ್ತೆ? ಆದರೆ ನಾಗಿಗೆ ಯಾವುದು ಸ್ವರ್ಗ ಸಮಾನೆನಿಸಿತೋ ಅದೇ ಲಲಿತೆಗೆ ನರಕವಾಗಿ ತೋರಿತು. ಈ ದೃಷ್ಟಿಭೇದಗಳೊಳಗಣ ತಿಕ್ಕಾಟವು ಈ ತಾಯಿ ಮಗಳ ಮನಸ್ತಾಪಕ್ಕೆ ಕಾರಣವಾಯಿತು.

ನಾಗಿಯು ಗದ್ಗದ ಕಂಠದಿಂದ "ಮಗೂ ಲಲಿತಾ" ಎಂದು ಬೆನ್ನು ಸವ ರಿದಳು. ಲಲಿತೆಯು ಫಕ್ಕನೆ ಎಚ್ಚತ್ತವಳಂತೆ ಕುರ್ಚಿಯಿಂದ ಜಗ್ಗನೆದ್ದು ದೂರ ಸರಿದು ನಿಂತು ಬಿಟ್ಟಳು. "ಕೋಪಿಸಿಕೊಳ್ಳಬೇಡ ಮಗೂ, ಬಾ ಕೂತುಕೋ" ಎಂದು ನಾಗಿಯು ಲಲಿತೆಯನ್ನು ಕೈಹಿಡಿದೆಳೆದು ಕುರ್ಚಿಯಲ್ಲಿ ಕೂತುಕೊಳ್ಳಿಸಿ ತಾನು ಹತ್ತಿರವೇ ಮೇಜಿನ ಮೇಲೆ ಕುಳಿತುಕೊಂಡಳು. "ಅಮ್ಮಾ ಘಂಟೆ ಹತ್ತಾಯಿತು. ಚಿಮುಣಿ ದೀಪದ ಹೊಗೆ ಕೋಣೆಯೆಲ್ಲೆಲ್ಲಾ ತುಂಬಿ ಹೋಯಿತು, ಮಲಗುವ." ಎಂದು ಲಲಿತೆಯು ನಾಗಿಯ ಮುಖ ನೋಡಿದಳು.

ನಾಗಿಗೆ ಲಲಿತೆ ಹೇಳಿದುದೇ ಕೇಳಲಿಲ್ಲ. ಅವಳ ಮನಸ್ಸನ್ನು ಬೇರೊಂದು ಯೋಚನೆಯು ಆಕ್ರಮಿಸಿತ್ತು. "ಚಂದ್ರಾವತಿಯನ್ನು ಬಲ್ಲೆಯಷ್ಟೆ ಮಗು? ಅವಳ ಆ ಸುಖ ವೈಭವಕ್ಕೇನಾದರೂ ಕುಂದಿದೆಯೇ? ನೀನೀಗ ಮನಸ್ಸು

ಮಾಡಿದರೆ ಅವಳಿಗಿಂತಲೂ ಹೆಚ್ಚಿನ ವೈಭವದಿಂದ ಮೆರೆಯಬಹುದು. ಮಗೂ, ನಾನು ಮಾತು ಕೊಟ್ಟಾಗಿದೆ. ನೀನೀರೀತಿ ಛಲಹಿಡಿಯುವುದು ಸರಿಯಲ್ಲ. ನಿನ್ನಾಣೆ ಲಲಿತ ನಮ್ಮ ಭಾಗ್ಯಕ್ಕಿನ್ನು ಕಡಿಮೆಯಿಲ್ಲ. ನಮ್ಮಂಥವರಿಗೆ ಅಂಥ ವರು ದೊರಕುವುದೇ ಅಸಾಧ್ಯ. ಏನೋ ಪೂರ್ವ ಪುಣ್ಯದಿಂದ, ನಿನ್ನ ಭಾಗ್ಯ ದಿಂದ"ಎಂದು ನಾಗಿಯು ಮುಖಬಗ್ಗಿಸಿ ನೆಲವನ್ನು ನೋಡುತ್ತಿರುವ ಲಲಿತೆಯ ಗಡ್ಡ ಹಿಡಿದೆತ್ತಿ ಮಾತು ಮುಂದುವರಿಸುವಷ್ಟರಲ್ಲಿ ಲಲಿತೆಯು ಅವಳ ಕೈಗಳೆರ ಡನ್ನೂ ಜೋಡಿಸಿ ಹಿಡಿದು, "ಅಮ್ಮಾ! ಮತ್ತೇನು ಬೇಕಾದರೂ ಹೇಳು, ಅದೊಂದು ಮಾತ್ರ ಹೇಳಬೇಡ. ನನಗೆ ಅದರಿಂದ ಎಂತಹ ಸುಖ ದೊರೆತರೂ ನಾನದಕ್ಕೊಪ್ಪಲಾರೆನು. ಅಮ್ಮಾ, ನಿನಗೆ ನನ್ನ ಮೇಲೆ ಒಂದಿಷ್ಟು ಕರುಣೆ ಯಿಲ್ಲವೇ? ನಾನು ಋತುವಾದರೇನು? ನನ್ನ ವಯಸ್ಸು ಕೇವಲ ಹದಿನಾಲ್ಕ ಲ್ಲವೇ? ಕ್ಷಮಿಸಮ್ಮಾ ಕ್ಷಮಿಸು. ನನಗದನ್ನು ನೆನಸಿದರೇನೇ ಭಯವಾಗು ವುದು, ಶರೀರವೆಲ್ಲಾ ಕಂಪಿಸುವುದು. ಈ ವರೆಗೆ ಎಂದಿಗಾದರೂ ನಿನ್ನ ಮಾತನ್ನು ಮೀರಿದವಳೇ ನಾನು? ಈಗ ನಿರ್ವಾಹವಿಲ್ಲವಮ್ಮಾ ಹಾಗೆಮಾಡದೆ. ನಾನು ನಿನ್ನ ಮಾತಿನಂತೆ ನಡೆದರೆ ನಿಶ್ಚಯವಾಗಿಯೂ ನನ್ನ ಸರ್ವನಾಶವಾಗು ವುದೆಂಬ ಭೀತಿಯಿಂದ ನನ್ನ ಹೃದಯವೇ ತಳಮಳಿಸುತ್ತಿರುವುದಮ್ಮಾ. ಬೇಡ, ಬೇಡ ಅಮ್ಮಾ ನೀನೀ ಛಲತೊಟ್ಟು ನನ್ನೀ ಬಾಳನ್ನು ಹಾಳುಮಾಡಬೇಡ." ಎಂದು ಲಲಿತೆಯು ಒಂದೇ ಸಮನೆ ಕಣ್ಣೀರಿಡಲು ನಾಗಿಯ ಹೃದಯವು ಕರಗಿದರೂ ಮನಸ್ಸಿನ ನಿರ್ಧಾರವೇನೂ ಬದಲಾಗಲಿಲ್ಲ.

ಅವಳು ಮನಸ್ಸು ಬಿಗಿಹಿಡಿದು "ನೀನೇನು ಮಾಡುವೆ ಮತ್ತೆ?" ಎಂದು ಸ್ವಲ್ಪ ಸಿಟ್ಟಿನಿಂದಲೇ ಪ್ರಶ್ನಿಸಿದಳು. "ನಾನು ಇನ್ನೆರಡು ವರ್ಷ ಕಲಿತು ಸ್ಕೂಲು ಫೈನಲ್ ಪಾಸಾಗುವೆನು. ಆ ಮೇಲೆ ಅಧ್ಯಾಪಕಿ ಅಥವಾ ಮಿಡ್ ವೈಫ್ ಆಗಲು ನಮ್ಮ ಟೀಚರ್ ಸುಮಿತ್ರಾಬಾಯಿಯವರು ಸಹಾಯಮಾಡು ವೆನೆಂದು ಮಾತುಕೊಟ್ಟಿದ್ದಾರಮ್ಮಾ. ನಾನೆಂದರೆ ಅವರಿಗೆ ಬಹಳ ಪ್ರೀತಿ. ಯಾವಾಗಲೂ ಅವರು ನನಗೆ ಬುದ್ಧಿ ಹೇಳುತ್ತಲೇ ಇದ್ದಾರೆ"ಎಂದು ಲಲಿತೆಯು ಉತ್ತರವಿತ್ತಳು. "ಹೌದೌದು ಹೇಳಿಕೊಟ್ಟ ಬುದ್ಧಿಯಿದು ನಿನ್ನದು! ನಿನಗೇನು ಲೋಕಾನುಭವವಿದೆ? ಅಧ್ಯಾಪಕಿ ಅಥವಾ ಮಿಡ್‌ವೈಫ್ ಆಗಿ ನೀನು ಹೀಗೆ ಯೇ ಇರುವೆಯಾ? ನಿನ್ನ ಸುಮಿತ್ರಾಬಾಯಿಯವರು ಮದುವೆಮಾಡಿಕೊಳ್ಳ

ಲಿಲ್ಲವೇ?" ಎಂದು ನಾಗಿಯು ಮತ್ತಷ್ಟು ಸಿಟ್ಟುಗೊಂಡಳು. "ನಾನೂ ಆ ಮೇಲೆ ಮದುವೆಯಾಗುವೆನಮ್ಮಾ. ಮದುವೆಯಾಗಿ ನಾವೆಲ್ಲರೂ ಸುಖವಾಗಿರಬಹುದು." ಎಂದು ನಿರ್ದುಷ್ಟವಾಗಿ ಲಲಿತೆಯು ನುಡಿದಳು. ನಾಗಿಯ ಕೋಪ ಮಿತಿಮೀರಿತು. ಅವಳು "ಹೌದೌದು ನೀನು ಮದುವೆಯಾಗುವೆ! ಯಾರನ್ನು? ನೋಡುವ, ನಿನ್ನ ಸುಮಿತ್ರಾ ಬಾಯಿಯವರು ನಿನಗೊಂದು ಯೋಗ್ಯ ಗಂಡನನ್ನೊದಗಿಸಿಕೊಡಲಿ!" ಎಂದು ಹಂಗಿಸಿ ಮಾತಾಡಿದಳು. "ಸಿಟ್ಟುಗೊಳ್ಳಬೇಡಮ್ಮಾ. ನೀನು ಕಲಿ, ಹುಶಾರಾಗು, ನಿನಗೊಬ್ಬ ಯೋಗ್ಯ ವರನನ್ನು ನಾನೊದಗಿಸಿ ಕೊಡುತ್ತೇನೆ"ಂದು ಸುಮಿತ್ರಾ ಬಾಯಿಯವರೇ ಹೇಳಿರುತ್ತಾರಮ್ಮಾ. ಅವರು ಬಹಳ ಒಳ್ಳೆಯವರು. ಅವರಿಗೆ ಹೆಣ್ಣು ಮಕ್ಕಳಿಲ್ಲ. ನನ್ನನ್ನವರು ತನ್ನ ಮಗಳಂತೆಯೇ ಪ್ರೀತಿಸುತ್ತಿದ್ದಾರೆ." "ಹೌದೌದು ಎಲ್ಲರೂ ಪ್ರೀತಿಸುತ್ತಾರೆ ಸ್ವಲ್ಪ ರೂಪವಿದ್ದರೆ! ಅವರೊಬ್ಬರು ಹೇಳಲಿಕ್ಕೆ, ನೀನು ಕೇಳಲಿಕ್ಕೆ! ನೀನೇನು, ನಿನ್ನ ಕಸುಬೇನು, ನೀನು ಮಾಡತಕ್ಕದ್ದೇನೆಂದು ನಿನಗಿನ್ನೂ ತಿಳಿದಿಲ್ಲ. ವಿದ್ಯೆ, ಶಾಲೆ, ಉದ್ಯೋಗ ಇದರಲ್ಲೇ ಬಿದ್ದಿದ್ದಿ ನೀನು." ಎಂದು ನಾಗಿಯು ಬಿರುನುಡಿದಳು.

"ಅಮ್ಮಾ ನನಗೆ ಬೆಳಗ್ಗೆ ಬೇಗ ಏಳಬೇಕು. ಕ್ಲಾಸು ಪರೀಕ್ಷೆಯಿದೆ. ಸ್ವಲ್ಪ ಓದಬೇಕು. ಇನ್ನು ಮಲಗಿದರಾಗದೇ?" ಎಂದು ಲಲಿತೆಯು ವಿನೀತಳಾಗಿ ಪುನಃ ನಾಗಿಯ ಮುಖ ನೋಡಿದಳು.

ನಾಗಿ:–ಆ ಸ್ವಾಮಿಯ ಜನರು ನನ್ನ ಪ್ರಾಣ ತಿನ್ನುತ್ತಿದ್ದಾರೆ. ನೀನೆಲ್ಲಿ ಅವರ ಕಣ್ಣಿಗೆ ಬಿದ್ದುಬಿಟ್ಟೆಯೋ? ನಾನು ನಿನ್ನೊಡನೊಂದು ಮಾತು ಕೂಡಾ ಕೇಳದೆ ಮಾತುಕೊಟ್ಟು ಸಿಕ್ಕಿಬಿದ್ದೆ. ಅವರು ಬಹಳ ಜೋರಿನವರು.

ಲಲಿತ:–ಅಮ್ಮಾ, ನಿನ್ನ ಮಗಳ ವಿಷಯದಲ್ಲಿ ನಿನಗೆ ಸ್ವತಂತ್ರವಿಲ್ಲವೇ? ಅವರೆಷ್ಟು ಜೋರಿನವರಾದರೇನು? ನಮ್ಮನ್ನೇನು ಮಾಡುವರು?

ನಾಗಿ:–ನಿನಗೇನು ಗೊತ್ತು ಅವರ ಸಂಗತಿ ಲಲಿತ.? ನಾನು ಕೊಟ್ಟ ಮಾತಿಗೆ ತಪ್ಪಿದ ಪಕ್ಷದಲ್ಲಿ ನಮ್ಮ ಮನೆಗೆ ಬೆಂಕಿಹಿಡಿಸಲೂ ಹಿಂಜರಿಯರವರು!

ಲಲಿತ:–ಎಂತಹ ಸ್ವಾಮಿಯವರಪ್ಪಾ ಅವರು ಅಷ್ಟು ಜೋರಿನವರು!

ನಾಗಿ:–ಒಟ್ಟಾರೆ ನಾನೀಗ ಸಿಕ್ಕಿಬಿದ್ದೆ. ಇನ್ನೇನು ಮಾಡುವುದು? ನಿನಗೆ ಬಂಗ್ಲೆಯಂಥಾ ದೊಡ್ಡ ಮನೆ ಕಟ್ಟಿಸಿಹಾಕಿ, ಖರ್ಚಿಗೆ ಬೇಕಷ್ಟು ಆಸ್ತಿ

ಯನ್ನು ನಿನ್ನ ಹೆಸರಲ್ಲೇ ಮಾಡಿ ಮರಣಕಾಲದ ವರೆಗೆ ನಿನ್ನನ್ನೊಬ್ಬಳನ್ನೇ ನಂಬಿ ಕೊಂಡಿದ್ದೇನೆಂದು ತನ್ನ ದೇವರಾಣೆಯಿಟ್ಟು ಮಾತುಕೊಟ್ಟಿದ್ದಾರವರು ಲಲಿತ. ಇಷ್ಟೆಲ್ಲಾ ಮಾಡಿ ನಾನೇ ಈಗ ಮಾತಿಗೆ ತಪ್ಪುವುದಾದರೂ ಹೇಗೆ?

ಲಲಿತ:–ಹೇಳಿದ್ದನ್ನೇ ಮತ್ತೂ ಹೇಳಿ ಫಲವೇನಮ್ಮಾ? ಆ ಮಾತು ಬಿಡು. ಮತ್ತೇನಾದರೂ ಮಾತಾಡು.

ನಾಗಿ:–ಹುಂ, ಎಷ್ಟು ಸುಲಭವಾಗಿ ನಿರ್ವಹಿಸಿಬಿಡುವೆ ನನಗೆ ಪ್ರಾಣಕ್ಕೆ ಬಂದಿರುವ ವಿಷಯವನ್ನು ನೀನು ಲಲಿತ?

ಲಲಿತ:–ನಿನಗೀಗೊಮ್ಮೆ ಪ್ರಾಣಕ್ಕೆ ಬಂದಿರುವುದೆಂದು ನಾನು ನನ್ನ ಪ್ರಾಣವನ್ನೇ ನಿರಂತರವೂ ನಾಶಮಾಡಿಕೊಳ್ಳಲೇ? ಅಮ್ಮಾ ನಿನಗಾಗಿ ಸರ್ವ ಸಾಧಾರಣ ಅಸಾಧ್ಯ ಕಾರ್ಯವನ್ನಾದರೂ ಸಾಧಿಸಲೆತ್ನಿಸುವುದು ನನ್ನ ಕರ್ತವ್ಯ. ಎಂದೆಂದಿಗೂ ತೀರಿಸಲಸದಳವಾದ ಋಣವಿದೆ ನಿನ್ನದು ನನ್ನ ಮೇಲೆ. ಅಂದ ಮೇಲೆ ನಿನಗೆ ಅವಿಧೇಯಳಾಗಿ ನಡೆಯುವುದು ನನಗೆ ಅದೆಂತಹ ಅಸಹನೀಯ ವೇದನೆಯಿರಬೇಕಮ್ಮಾ! ನಿನ್ನ ಮಾತು ಮೀರುವುದು ನನಗಷ್ಟು ಸುಲಭವೆಂದು ಬಗೆದೆಯಾ? ನಾನು ಅಷ್ಟೊಂದು ಕೃತಘ್ನಳೇ?

ಲಲಿತೆಯ ಕಣ್ಣುಗಳಲ್ಲಿ ಪುನಃ ನೀರು ತುಂಬಿ ಹರಿಯಿತು. ಅದನ್ನು ಕಂಡೊಡನೆಯೇ ನಾಗಿಯ ಹೃದಯವು ಫಕ್ಕನೆ ಮೃದುವಾಯಿತು. ಅವಳು ತನ್ನ ಸೆರಗಿನಿಂದ ಲಲಿತೆಯ ಕಣ್ಣೀರೊರೆಸಿ, "ಅಳಬೇಡ ಮಗೂ ಅಳಬೇಡ. ನಾನೂ ನಿನ್ನ ಒಳ್ಳಿತನ್ನೇ ಬಯಸಿ ನೀನೊಪ್ಪುವೆಯೆಂದು ನೆನಸಿ ಮಾತುಕೊಟ್ಟು ಸಿಕ್ಕಿಬಿದ್ದೆ. ಇನ್ನು ಹೇಗಾದರೂ ತಪ್ಪಿಸಿಕೊಳ್ಳುವಂತೆ ಪ್ರಯತ್ನಿಸುವೆನು. ದೈವೇಚ್ಛೆ ಇದ್ದಂತಾಗುವುದು. ಇನ್ನಾ ಕುರಿತು ಚಿಂತೆ ಕಟ್ಟಿಕೊಳ್ಳಬೇಡ. ಎಳೆ ಹುಡುಗಿ ನೀನು ಯಾವಾಗಲೂ ಕಣ್ಣೀರು ಸುರಿಸುತ್ತಿರಬಾರದು. ಹೋಗು ಮಲಗು, ನಾನೂ ಮಲಗುವೆನು. ನನಗೆ ಅಡಿಗೆಕೋಣೆಯಲ್ಲಿ ಸ್ವಲ್ಪ ಕೆಲಸವಿದೆ" ಎಂದು ಲಲಿತೆಯು ಚಾಪೆಬಿಡಿಸುವ ವರೆಗೆ ಚಿಮಣಿ ಹಿಡಕೊಂಡು ನಿಂತು ಆ ಮೇಲೆ ಅಡಿಗೆಕೋಣೆಗೆ ಹೋದಳು.

# ಅಧ್ಯಾಯ ೨

## "ಹಿಡಿಯಿರಿ ರಂಡೆಗಳಿಬ್ಬರನ್ನೂ!"

ತಾಯಿ ಮಗಳಿಬ್ಬರೇ ಇರುವುದರಿಂದ ಹೊತ್ತುಮುಳುಗಿದ ಕೂಡಲೆ ನಾಗಿಯು ರಸ್ತೆಯೆದುರಿನ ಮನೆಬಾಗಿಲು ಹಾಕಿಬಿಡುತ್ತಿದ್ದಳು. ಎಂಟು ಎಂಟೂವರೆ ಘಂಟೆ ರಾತ್ರಿಯಾಗಬಹುದು. "ಅಮ್ಮಾ ಸ್ವಲ್ಪ ಬಾಗಿಲು ತೆರೆಯಿರಿ" ಎಂದು ಕೂಗಿ ಬಾಗಿಲಿಗೆ ಬಡಬಡ ಬಡಿದ ಶಬ್ದವಾಯಿತು. "ಯಾರದು? ಸ್ವಲ್ಪ ಮೆಲ್ಲಗೆ ಬಾಗಿಲು ಬಡಿಯಿರಿ. ಬಾಗಿಲು ಒಡೆದು ಹೋದೀತು ಎಲ್ಲಿಯಾದರೂ" ಎಂದು ನಾಗಿಯು ಸ್ವಲ್ಪ ಸಿಟ್ಟಿನಿಂದ ಬಿರುಸಾಗಿ ಮಾತಾಡಿದಳು. "ನಾನು ವೆಂಕಟ್ರಮಣ, ಅಕ್ಕಾ ಊಟ ಉಂಟೋ ಮುಗಿಯಿತೊ? ಇವತ್ತು ಇಡೀ ದಿನ ಊಟಮಾಡಲಿಲ್ಲಮ್ಮಾ! ಕಾಫಿ ಕುಡಿಕುಡಿದು ಜೀವಸಂಕಟವಾಗುತ್ತಿದೆ. ಒಂದು ಮುಷ್ಟಿ ಅನ್ನಹಾಕದೆ ನಿರ್ವಾಹವಿಲ್ಲಮ್ಮಾ" ಎಂದಿತು ಹೊರಗಿನ ವ್ಯಕ್ತಿ ದೀನ ಮತ್ತು ಕ್ಷೀಣ ಸ್ವರದಿಂದ. ನಾಗಿಯು,"ಒಹೋ ವೆಂಕಟ್ರಮಣನೇ! ಬಹಳ ಅಪರೂಪ" ಎಂದು ಎಡಗೈಯಲ್ಲಿ ಚಿಮಣಿ ಹಿಡಕೊಂಡು ಬಲಗೈಯಲ್ಲಿ ಬಾಗಿಲು ತೆರೆದು ಚಿಮಣಿಯನ್ನು ವೆಂಕಟ್ರಮಣನ ಮುಖಕ್ಕೆದುರಾಗಿ ಹಿಡಿದು ಪರೀಕ್ಷಿಸಿದಳು. ಬೆಳಕು ಕಂಡೊಡನೆಯೇ ವೆಂಕಟ್ರಮಣನ ಕಣ್ಣುಗಳು ಮುಚ್ಚಿಹೋದುವು. ಆದರೆ ಆ ಮೊದಲು ಅವು ತಮ್ಮ ಸ್ವರೂಪವನ್ನು ನಾಗಿಗೆ ಕ್ಷಣಮಾತ್ರದಲ್ಲಿ ವ್ಯಕ್ತಗೊಳಿಸಿಬಿಟ್ಟವು. ಅದೇನೋ ದುರುದ್ದೇಶದಿಂದ ಬಂದುದೆಂದು ವೆಂಕಟ್ರಮಣನ ಹೊಗೆಹಿಡಿದ ಮುಖವು ಎತ್ತಿ ತೋರಿಸುತ್ತಿತ್ತು. ಅವನು ತನ್ನೆದುರು ಚಿಮಣಿ ಹಿಡಿದು ನಿಂತಿರುವ ನಾಗಿಯನ್ನು ಮುಖವೆತ್ತಿ ಕೂಡಾ ನೋಡದೆ, ಅವಳೊಡನೆ ಒಂದು ಮಾತು ಕೂಡಾ ಆಡದೆ, ಟೀಕೆಟಿಲ್ಲದೆ ರೈಲುಬಂಡಿಯೊಳ ನುಗ್ಗುವವನಂತೆ ಫಕ್ಕನೆ ನಾಗಿಯ ಮನೆಯೊಳಕ್ಕೆ ನುಗ್ಗಿಬಿಟ್ಟನು. ಅವನ ಶರೀರದಲ್ಲಿ ಸ್ಥಿರತೆಯಿರಲಿಲ್ಲ. ವರ್ತನೆಯು ನೆಟ್ಟಗಿರಲಿಲ್ಲ. ಇದನ್ನೆಲ್ಲಾ ಕಂಡ ನಾಗಿಯ ಮನಸ್ಸು ಬಹಳ ಸಂದೇಹಕ್ಕೊಳಗಾಯಿತು. ತನ್ನೊಡನೆ ಅತ್ಯಂತ ಸಲುಗೆಯಿಂದಿದ್ದು, ಮಾತುಮಾತಿಗೆ ಅಮ್ಮಾ, ಅಕ್ಕಾ, ಎಂದು ಕರೆದು, ಲಲಿತೆಯನ್ನು ಹಾಗೆ ಮಾಡಬೇಕು ಹೀಗೆ ಮಾಡಬೇಕು ಎಂದು ಹಿತೋಪದೇಶ

ವಿತ್ತು, ಬಾಯಿತುಂಬಾ ಮಾತಾಡಿ, ನಗೆಯ ಚೆಲ್ಲಾಟವಮಾಡಿ, ಆರಾಮವಾಗಿ ಕುಳಿತು ವೀಳ್ಯಹಾಕಿ, ಅಲ್ಲಿ ಹಾಗಾಯಿತು, ಇಲ್ಲಿ ಹೀಗಾಯಿತೆಂದು ಪತ್ರಿಕೆಗಳಿಗೂ ಸಿಗದ ಊರು ಪರವೂರುಗಳ ಸುದ್ದಿಗಳ ನಾರದನಾಗಿ ಆತ್ಮೀಯನಂತಿರುತ್ತಿದ್ದ ಆ ವೆಂಕಟ್ರಮಣನೆಲ್ಲಿ! ಮಿತಗೆಟ್ಟು ಕುಡಿದು ಕೆಂಗಣ್ಣನಾಗಿ, ಮುಖವೆತ್ತಿ ಮಾತಾಡಲು ಕೂಡಾ ಸಾಧ್ಯವಾಗದೆ ಬಾಗಿಲು ತೆರೆದೊಡನೆಯೇ ಅಪರಾಧಿಯಂತೆ ಒಳಗೆ ನುಸುಳಿದ ಈ ವೆಂಕಟ್ರಮಣನೆಲ್ಲಿ! ನಾಗಿಯು ಅನುಮಾನ ಪಟ್ಟಳು. ಅವಳ ಮನಸ್ಸು ಸ್ವಲ್ಪ ಪಲ್ಲಟಿಸಿತು. "ಛೆ ವೆಂಕಟ್ರಮಣನಂಥವನು ಹಾಗೇನೂ ಮಾಡಲಾರ. ಇವತ್ತೇನೋ ಸ್ವಲ್ಪ ಹದತಪ್ಪಿ ಕುಡಿದಿರಬೇಕು. ಯಾರದೋ ಧರ್ಮಕ್ಕೆ ಸಿಕ್ಕಿರಬೇಕು" ಎಂದು ನಾಗಿಯು ತಾನೇ ತನ್ನ ಸಂದೇಹ ನಿವಾರಿಸಿಕೊಂಡಳು. ಆ ಮೇಲೆ ಒಳಗೆ ಹೋಗಿ ನೋಡುವಾಗ ವೆಂಕಟ್ರಮಣನು ಚಾವಡಿಯ ಒಂದು ಮೂಲೆಯಲ್ಲಿ ಗೋಡೆಗೆ ಮುತ್ತಿಟ್ಟೋ ಎಂಬಂತೆ ಮಲಗಿಕೊಂಡಿದ್ದನು. "ವಿಪರೀತ ಕುಡಿದಿರಬೇಕು ಪಾಪ" ಎಂದು ನಾಗಿಯು, "ವೆಂಕಟ್ರಮಣ, ವೆಂಕಟ್ರಮಣ, ಒಂದು ತುತ್ತು ಊಟಮಾಡಿ ಮಲಗಪ್ಪ. ರಾತ್ರಿ ಬರಿ ಹೊಟ್ಟೆಯಲ್ಲಿ ಮಲಗಬಾರದು ಮಗ" ಎಂದು ತೋಳು ಹಿಡಿದು ಅಲುಗಿಸಿದಳು. "ಬೇಡಮ್ಮಾ ಬೇಡ. ನನಗೆ ಜೀವಸಂಕಟದಿಂದ ತಲೆಯೆತ್ತಲು ಕೂಡಾ ಸಾಧ್ಯವಿಲ್ಲ. ನಾನು ಸ್ವಲ್ಪ ಮಲಗುತ್ತೇನಮ್ಮಾ, ದೀಪ ಸ್ವಲ್ಪ ಆಚೆಗೆ ಕೊಂಡು ಹೋಗಿ" ಎಂದ ವೆಂಕಟ್ರಮಣ ಕಣ್ಣು ಸಹ ತೆರೆಯದೆ. "ಅದು ಕೂಡದು ಮಗ, ಊಟಮಾಡದಿದ್ದರೆ ಒಂದಿಷ್ಟು ಹಾಲಾದರೂ ಕುಡಿದು ಮಲಗು, ಏಳು ಏಳು" ಎಂದು ನಾಗಿಯು ಮತ್ತಷ್ಟು ಬಲವಾಗಿ ಮೈ ಕುಲುಕಿದಳು. "ಇಲ್ಲಮ್ಮಾ ಇಲ್ಲ. ನನಗೆ ಬಾಯಾರಿಕೆ ಆಗುವುದಿಲ್ಲ. ನನ್ನನ್ನು ಸ್ವಲ್ಪ ನನ್ನಷ್ಟಕ್ಕೆ ಬಿಡಿ. ಅಷ್ಟುಮಾಡಿ. ಎಲ್ಲಾ ನಾಳೆ ಮಾತಾಡುವ." ಎಂದು ನಾಗಿಯೊಡನೆ ಮಾತಾಡಲೂ ಸಹ ಮನಸ್ಸಿಲ್ಲದೆ ಬೇಡಿಕೊಳ್ಳುವ ವೆಂಕಟ್ರಮಣನನ್ನು ಕಂಡು ನಾಗಿಯು ಕುಡುಕತನದ ಅವಸ್ಥೆಗಾಗಿ ಬಹಳಕನಿಕರಪಟ್ಟು, "ಅಯ್ಯೋ ಭಗವಂತ!" ಎಂದು ನಿಟ್ಟುಸಿರಿಟ್ಟು ಜೋಲುಮೋರೆ ಮಾಡಿಕೊಂಡು ಒಳಗೆ ಹೋದಳು. ಮನೆಯ ದಕ್ಷಿಣಭಾಗದ ಒಂದು ಮೂಲೆಯ ಕೋಣೆಯಲ್ಲಿ ಬಾಗಿಲು ಹಾಕಿಕೊಂಡು ಓದುವುದರಲ್ಲೇ ನಿರತಳಾಗಿದ್ದ ಲಲಿತೆಯ ಜೀವನ

ವೃಕ್ಷಕ್ಕೆ ವಜ್ರಘಾತವಾಗಲಿರುವ ಈ ವಿದ್ಯಮಾನದ ಯಾವ ಸಂಗತಿಯೂ ಅವಳಿಗೆ ತಿಳಿಯಲಿಲ್ಲ. ಹೊರಗಿಂದ ಕರೆದು ಬಾಗಿಲು ಬಡೆದ, ನಾಗಿಯು ಬಾಗಿಲು ತೆರೆದು ಮಾತನಾಡಿದ ಶಬ್ದವೆಲ್ಲಾ ಲಲಿತೆಗೆ ಕೇಳಿಸಿತ್ತು. ಆದರೆ ಯಾರೋ ಅಮ್ಮನ ಪರಿಚಯಸ್ಥರು ಊಟಕ್ಕೆ ಬಂದಿರಬೇಕೆಂದವಳು ಅದರ ಗೊಡವೆಗೇ ಹೋಗಲಿಲ್ಲ. ನಾಗಿಯೂ ಆ ಕುರಿತು ಯಾವ ಸಂಗತಿಯನ್ನೂ ಅವಳಿಗೆ ತಿಳಿಸಲಿಲ್ಲ. ತಿಳಿಸುವ ಅವಶ್ಯವೂ ಇರಲಿಲ್ಲ. ಅಷ್ಟೊಂದು ಅಪ್ರಾಮುಖ್ಯವಾಗಿದ್ದಿತಾಸಂಗತಿ ಆಗ.

ಅಂದಿನ ರಾತ್ರಿ ಅದೇಕೋ ಲಲಿತೆಗೆ ನಿದ್ದೆಯೇ ಬರಲೊಲ್ಲದು. ನಾಗಿಯು ಅಡಿಗೆಮನೆಯ ಕೆಲಸವನ್ನೆಲ್ಲಾ ಮುಗಿಸಿಕೊಂಡು ಕೋಣೆಗೆ ಮಲಗ ಹೋದಾಗ, ಲಲಿತೆಯು ಓದುತ್ತಲೇ ಇದ್ದಳು. ಬೇರೆ ದಿನಗಳಲ್ಲಾದರೆ ಅವಳು ಗಾಢನಿದ್ರಾವಶಳಾಗುವ ಸಮಯವಾಗಿತ್ತು. “ಅದೇಕೆ ಲಲಿತ, ಇನ್ನೂ ಮಲಗಿಲ್ಲ? ಹತ್ತುಘಂಟೆ ಹೊಡೆಯಿತಲ್ಲ? ಎಷ್ಟು ರಾತ್ರಿ ಓದಿ ಕುಳಿತುಕೊಳ್ಳುವೆ? ಮಲಗು ಮಗು ಮಲಗು” ಎಂದು ನಾಗಿಯು ಒತ್ತಾಯ ಮಾಡಿದಳು. ‘ಅಮ್ಮಾ ನನಗಿಂದು ನಿದ್ದೆಯೇ ಬರಲಾರದು. ನಾನು ಇನ್ನೂ ಸ್ವಲ್ಪ ಸಮಯ ಓದಿ ಕುಳಿತುಕೊಳ್ಳಲೇ? ‘ವಾಗ್ದೇವಿ’ ಎಂಬ ಕತೆಮುಗಿಸಲು ಇನ್ನು ಸ್ವಲ್ಪ ಮಾತ್ರವುಂಟಮ್ಮಾ. ನೀನು ಮಲಗು, ನಾನು ಇನ್ನೊಂದು ಅರ್ಧಘಂಟೆಯಲ್ಲೀ ಅದನ್ನು ಮುಗಿಸಿ ಮಲಗುತ್ತೇನೆ.” ಎಂದಳು ಲಲಿತೆ ಅತಿ ವಿನಯದಿಂದ. “ಯಾರು ಕೊಟ್ಟರು ನಿನಗಾ ಪುಸ್ತಕವನ್ನು? ಯಾಕೆ ಓದುವುದು ನೀನದನ್ನು? ಸಾಕು ಸಾಕು ಓದಿದುದಿನ್ನು. ಮಲಗು ಮಲಗು” ಎಂದು ನಾಗಿಯು ಗದರಿಸಿದಳು. “ವಾಗ್ದೇವಿಯನ್ನೋದಿದ ನನಗೆ ಮಠ ದೇವಸ್ಥಾನಗಳಲ್ಲಿ ಎಂತೆಂತಹ ದುಷ್ಕೃತ್ಯಗಳೆಲ್ಲಾ ನಡೆಯುತ್ತಿರುವುವೆಂದು ಚೆನ್ನಾಗಿ ಮನವರಿಕೆಯಾಯಿತಮ್ಮಾ. ಇದು ಹೊರತು, ನಾವು ಸುಮ್ಮನೆ ಏನೇನೋ ಆಶೆ ಕಟ್ಟಿಕೊಂಡು ಅದನ್ನು ನೆರವೇರಿಸಿಕೊಳ್ಳಲು ಯಾವ ದುಷ್ಕೃತ್ಯ ಮಾಡಲೂ ಹೇಸದಿರುವುದು. ಅದರ ಪರಿಣಾಮ ಮಾತ್ರ ಪ್ರತಿವಿರುದ್ಧವಾಗುವುದು. ವಾಗ್ದೇವಿಯು ತನ್ನ ಮಗನೊಬ್ಬನನ್ನು ಸನ್ಯಾಸಿ ಪಟ್ಟಕ್ಕೇರಿಸಲು ಏನೆಲ್ಲಾ ಪ್ರಯತ್ನಮಾಡಿದಳಮ್ಮಾ? ಅದರಿಂದಾಗಿ ಏನೆಲ್ಲಾ ಅನಾಹುತವಾಯಿತು! ಕೂಡದಮ್ಮಾ ಕೂಡದು, ಎಂದಿಗೂ ದುರಾಶೆಗೆ ಮನಸ್ಸು ಕೊಡಕೂಡದು.

ಇದ್ದುದರಲ್ಲೇ ತೃಪ್ತಿ ಹೊಂದಬೇಕು. ಸದ್ಧರ್ಮದಲ್ಲಿ ನಡೆಯಬೇಕು" ಎಂದು ಲಲಿತೆಯು ಬಹಳ ಆಗ್ರಹದಿಂದ ತಾಯಿಯೊಡನೆ ಕೇಳಿಕೊಂಡಳು. ಅವಳು ತಾಯಿಗೆ ಬುದ್ಧಿವಾದ ಹೇಳಲು ಎದೆಗೊಂಡುದು ಇದೇ ಮೊದಲು. ವಾಗ್ದೇವಿಯ ಕತೆಯು ಅವಳ ಮನಸ್ಸನ್ನು ಚೆನ್ನಾಗಿ ಮಥಿಸಿ ಕಲ್ಲೋಲವನ್ನೆಬ್ಬಿಸಿತ್ತು. ತಾಯಿಯ ದುರಾಶೆಯಿಂದಾಗಿ ತನ್ನ ಜೀವನ ಪುಷ್ಪವನ್ನು ಮೊಗ್ಗೆಯಲ್ಲೇ ಅನೀತಿಯ ಕೀಟವು ಕೊರೆದು ಕರುಬಿಸಿ ಬಿಡುವುದೋ ಎಂಬ ಭೀತಿಯು ಅವಳಲ್ಲಿ ಅಂದೇಕೋ ವಿಶೇಷ ಉದ್ವೇಗವನ್ನುಂಟುಮಾಡಿತ್ತು. "ಯಾಕೆ ಓದುವುದು ನೀನದನ್ನು?" ಎಂಬ ತಾಯಿಯ ಸಿಟ್ಟಿನ ಪ್ರಶ್ನೆಯು ಅವಳ ಭೀತಿಯನ್ನು ಮತ್ತಷ್ಟು ಬಲಗೊಳಿಸಿತು. ಆಗ ಅವಳ ಬಾಯಿಯಿಂದ ಒಂದೇ ಸವನೆ ಮೇಲಿನ ಉಪದೇಶ ವಾಕ್ಯಗಳು ಹೊರಬಿದ್ದುವು. ನಾಗಿಯು ಆಶ್ಚರ್ಯಗೊಂಡು ಲಲಿತೆಯ ಮುಖವನ್ನು ದಿಟ್ಟಿಸಿದಳು. ಅವಳ ಮುಖಕಮಲದ ಮೇಲಿಂದ ಬೆವರ ಹನಿಗಳು ಜಾರಿಬೀಳುತ್ತಿದ್ದುವು. ಮನೋಹರವಾಗಿ ಹೊಳೆಯುತ್ತಿರುವ ಹಣೆಯು ಸಂಪೂರ್ಣ ಒದ್ದೆಯಾಗಿ ಹೋಗಿತ್ತು. ಕಣ್ಣುಗಳು ನಿಸ್ತೇಜವಾಗಿದ್ದುವು. "ನನಗೇಕೋ ಇವತ್ತು ಬಹಳವಾಗಿ ಬೆವರುತ್ತದಮ್ಮ" ಎಂದು ಲಲಿತೆಯು ಮೇಜಿಯ ಮೇಲಿನ ಕರವಸ್ತ್ರ ತೆಗೆದು ಮುಖ, ಕುತ್ತಿಗೆ, ಮುಂಗೈಗಳನ್ನೆಲ್ಲಾ ಒರಸಿಕೊಂಡಳು. "ಲಲಿತ, ನೀನೀಗ ನನಗೆ ಬುದ್ಧಿ ಹೇಳುವವಳಾಗಿ ಹೋದೆಯಲ್ಲ? ಈ ವಾಗ್ದೇವಿ ಕತೆಯನ್ನು ನೀನೆಂದಿಗೂ ಓದಬಾರದು. ಬೇರೆಯಾವ ಪುಸ್ತಕವೂ ನಿನಗೆ ಸಿಗಲಿಲ್ಲವೇ" ಎಂದು ನಾಗಿಯು ಲಲಿತೆಯ ಕೈಯಿಂದ ಪುಸ್ತಕವನ್ನೆಳೆದು ತೆಗೆದುಕೊಂಡು ಮೇಜಿಯ ಮೂಲೆಗೆ ಬಿಸಾಡಿ, "ಮಲಗು ಲಲಿತ ಮಲಗು" ಎಂದು ಮೈದಡವಿ ಒತ್ತಾಯಮಾಡಿ ಮಲಗುವಂತೆ ಮಾಡಿದಳು.

ಅಂದು ಮಾಘ ಮಾಸದ ಕೃಷ್ಣಪಕ್ಷದ ದ್ವಾದಶಿ ರಾತ್ರಿ. ಶಿವಪುರವು ನಿದ್ರಾಲಿಂಗನಾ ಸುಖದಲ್ಲಿ ಮೈಮರೆತು ಬಿದ್ದಿತ್ತು. ಪ್ರಕೃತಿ ದೇವಿಯು ಭಾರಿ ಚಳಿಯಲ್ಲಿ ಕರಿಕಂಬಳಿ ಹೊದ್ದು ಪವಡಿಸಿದ್ದಂತೆ ತೋರುತ್ತಿತ್ತು. ಗಂಭೀರ ನೀರವವು ತಾರೆಗಳ ಮಿಣಿಮಿಣಿ ದೀಪಾರತಿ ಪಡೆದು ತಾನೇ ತಾನಾಗಿ ಮೆರೆಯುತ್ತಿತ್ತು. ಬೀಧಿಯ ಭಿಕಾರಿ ನಾಯಿಗಳೂ ತಮ್ಮ ಬಗುಳಾಟದ ಮೇಲಾಟ ನಿಲ್ಲಿಸಿ ಸಿಕ್ಕಿದಷ್ಟು ಬೆಚ್ಚಗಿನ ಮೂಲೆಗೆ ಸೇರಿ ನಿದ್ದೆ

ಹೋಗಿದ್ದುವು. ಇಂತಹ ಅಪರ ರಾತ್ರಿಯಲ್ಲಿ ಮೋಟರ್ ಕಾರೊಂದು ನಾಗಿಯ ಮನೆಯ ಮುಂಭಾಗದಲ್ಲಿ ಬಂದು ನಿಂತಿತು. ಕೂಡಲೆ ಅದರ ದೀಪಗಳು ನೊಂದಿಸಲ್ಪಟ್ಟವು. ಕಾರಿನಿಂದ ವ್ಯಕ್ತಿಯೊಂದು ಬಾಗಿಲು ತೆರೆದು ಹೊರಬಂದು ನಾಗಿಯ ಮನೆಯ ಹೊರದ್ವಾರಕ್ಕೆ ಬಲವಾದ 'ಬೆಟ್ಟರಿ ಲೈಟು' ಹಾಕಿತು. ಬಾಗಿಲ ಬಳಿ ಹೋಗಿ ಮೆಲ್ಲಗೆ ಬಾಗಿಲು ಬಡೆಯಿತು. ಆ ಮೇಲೆ "ವೆಂಕಟೋ, ವೆಂಕಟೋ" ಎಂದು ಕೈಬೆರಳುಗಳನ್ನು ಮಡಿಸಿ ಬಾಗಿಲ ಸಂದಿಗೊತ್ತಿಟ್ಟು ಆ ಮಡಿಕೆಯ ತೂತಿನೊಳಗಿಂದ ಸಾಕಷ್ಟು ಗಟ್ಟಿಯಾಗಿ ವೆಂಕಟ್ರಮಣನನ್ನು ಕರೆಯಿತು. ಒಳಗಿದ್ದ ವೆಂಕಟ್ರಮಣನು ಎದ್ದು ಕೂತು ತಲೆತುರಿಸಿಕೊಂಡು ತುಸುಹೊತ್ತು ಯೋಚಿಸತೊಡಗಿದನು. ಎಂದೂ ಇಲ್ಲದ ಬೇಸರವು ಅಂದು ಅವನ ಮನಸ್ಸನ್ನು ಹಿಡಿದು ಕಾಡುತ್ತಿತ್ತು. ಸುರೆಯ ಅಮಲಿನ ಸೆರೆಯೊಳಗಿಂದಲೂ, 'ವಿಶ್ವಾಸ ಘಾತುಕ ಮಾಡಬೇಡ!' ಎಂದು ಅಂತರಂಗವು ಪದೇ ಪದೇ ಕೂಗಿಡುತ್ತಿತ್ತು. ವೆಂಕಟ್ರಮಣನಿಗೆ ನಿದ್ದೆಯೇ ಬಂದಿರಲಿಲ್ಲ. ತಲೆಗೇರಿದ ಅಮಲಿನ ಬಿಗಿತವು ಸಡಿಲಾದೊಡನೆಯೇ ವಿವೇಕವು ಇಣಿಕಹತ್ತಿತು ಅವನಲ್ಲಿ. ಅವನು ಏನೇನೋ ಯೋಚಿಸಿಕೊಂಡು ನೆಲದ ಮೇಲೆ ಹೊರಳಾಡುತ್ತಿದ್ದನು. ಹಣದಾಶೆಯಿಂದ ಕೊಟ್ಟ ಮಾತು, ಮಾತಿಗೆ ತಪ್ಪಿದರೆ ಪರಿಣಾಮ ಏನಾಗುವುದೋ ಎಂಬ ಭೀತಿ ಒಂದೆಡೆ; ತನ್ನ ಮೇಲಿನ ನಾಗಿಯ ಪುತ್ರ ಸಮಾನ ಪ್ರೀತಿ, ಅವಳ ಸಚ್ಚರಿತೆ ಹಾಗೂ ನಿರ್ದುಷ್ಟ ಪುತ್ರಿಗಾಗುವ ಗತಿಯ ಚಿಂತೆ ಇನ್ನೊಂದೆಡೆ. ಹೀಗೆ ವೆಂಕಟ್ರಮಣನ ಮನಸ್ಸೆಂಬುದು ಗಡಿಯಾರದ 'ಪೆಂಡ್ಯುಲಮಿ'ನಂತೆ ಓಲಾಡುತ್ತಿತ್ತು. ಅದರಿಂದಲೇ ಶರೀರದ ಹೊರಳಾಟವೂ. ವೆಂಕಟು, ವೆಂಕಟು, ಎಲ್ಲಿ ಸತ್ತುಹೋದೆ! ಬಾಗಿಲು ತೆರೆಯುತ್ತಿಯೋ ಇಲ್ಲವೋ?' ಎಂಬ ನಿಷ್ಠುರೋಕ್ತಿಯು ಎದ್ದು ಕೂತ ವೆಂಕಟ್ರಮಣನ ಮನಸ್ಸಿನ ಓಲಾಟವನ್ನು ಉತ್ತರಕ್ಷಣದಲ್ಲೇ ನಿಲ್ಲಿಸಿಬಿಟ್ಟಿತು. ಅವನು 'ಹೂಂ'–ಎಂದು ದೀರ್ಘ ಶ್ವಾಸಬಿಟ್ಟು ಎದ್ದು ಮೆಲ್ಲಗೆ ಬಾಗಿಲು ತೆರೆದನು. 'ಬೆಟ್ಟರಿ ಲೈಟಿನ' ವ್ಯಕ್ತಿಯು ಕೂಡಲೆ ಒಳಗೆ ಬಂದು ವೆಂಕಟ್ರಮಣನ ಕೈರಟ್ಟೆಯನ್ನು ಬಲವಾಗಿ ಹಿಡಿಯಿತು. ವೆಂಕಟ್ರಮಣನು 'ಅಯ್ಯೋ' ಎಂದು ಗಡಗುಟ್ಟಿ ನಡುಗಿದನು. 'ಮುಚ್ಚುಬಾಯಿ ಮೂರ್ಖ! ನಾವು ಎಷ್ಟು ಹೊತ್ತು ಕಾಯುತ್ತಿರುವುದು ಹೊರಗೆ?' ಎಂದಿತು ವ್ಯಕ್ತಿ

ಸಿಟ್ಟಿನ ಪಿಸುಮಾತಿನಿಂದ. "ನಾನಿನ್ನೇನು ಮಾಡಬೇಕಪ್ಪ ಹೇಳಿ, ಕೈಬಿಡಿ" ಎಂದು ವೆಂಕಟ್ರಮಣನು ಸ್ವಲ್ಪ ಶಕ್ತಿಯನ್ನುಪಯೊಗಿಸಿ ತೋಳನ್ನು ವ್ಯಕ್ತಿಯ ಸಡಿಲಾದ ಕೈ ಹಿಡಿತದಿಂದ ತಪ್ಪಿಸಿಕೊಂಡನು. "ಮಠದಲ್ಲಿ ಸ್ವಾಮಿರು ಹೇಳಿದ್ದೆಲ್ಲಾ ಮರೆತುಹೋಯಿತೇ? ಅವರಂದಂತೆ ಮಾಡು. ನನಗೋಸ್ಕರವಾಗಿ ನೀನೇನೂ ಮಾಡಬೇಕಾಗಿಲ್ಲ ತಿಳಿಯಿತೇ?' ಎಂದಿತು ವ್ಯಕ್ತಿ ಒತ್ತಿಟ್ಟ ಸಿಟ್ಟಿನ ಕತ್ತಿನೊಳಗಿಂದ. ಸ್ವಾಮಿರ ಮಾತೆತ್ತಿದೊಡನೆಯೇ ವೆಂಕಟ್ರಮಣನು ಪ್ರತಿ ಮಾತೆತ್ತದೆ ಕೂಡಲೆ ಹೊರಚಾವಡಿಯೊಳಗಿಂದ ಬಾಗಿಲಿಲ್ಲದ ಉಣ್ಣುವ ಕೋಣೆಗೆ ಹೋಗಿ ಅದರ ಎಡಭಾಗದ ನಾಗಿ ಲಲಿತೆಯರು ಮಲಗಿದ್ದ ಕೋಣೆಯ ಬಾಗಿಲಿಗೆ ಬಡಬಡನೆ ಬಡೆದು, 'ಅಮ್ಮಾ, ಅಮ್ಮಾ! ಬಾಯಾರಿಕೆಯಾಗುತ್ತದೆ. ಎದೆಯೆಲ್ಲಾ ಸುಡುತ್ತಿದೆ. ಕುತ್ತಿಗೆ ಒಣಗಿಹೋಗಿದೆ. ಸ್ವಲ್ಪ ನೀರುಕೊಡಿ, ಅಷ್ಟುಮಾಡಿ" ಎಂದು ಅತಿ ದೈನ್ಯದಿಂದ ಬೇಡಿಕೊಂಡನು. 'ಅಮ್ಮಾ, ಅಮ್ಮಾ! ಅದಾರು? ಅಯ್ಯೋ! ಅಯ್ಯೋ! ಬಾಗಿಲು ತೆರೆಯಬೇಡ! ಯಾರೋ ದುರಾತ್ಮರು............"ಎಂದು ಮುಂದೆ ಮಾತನಾಡಲಾರದೆ ಲಲಿತೆಯು ಬೆದರಿ ಕೂಗಿಬಿಟ್ಟಳು. ಮೊದಲೇ ಎಚ್ಚರವಾಗಿದ್ದ ನಾಗಿಯು ದಡಬಡನೆ ಎದ್ದು ಓಡಿಹೋಗಿ ಲಲಿತೆಯನ್ನು ಬಿಗಿಹಿಡಿದು, "ಹೆದರಬೇಡ ಮಗು ಹೆದರಬೇಡ, ವೆಂಕಟ್ರಮಣನಿಗೆ ಬಾಯಾರಿಕೆಯಾಗುವುದಂತೆ ಪಾಪ! ನಾನು ಆಗಲೇ ಹೇಳಿದೆ ಅವನೊಡನೆ, ಬಾಯಾರಿಕೆಯಾಗಬಹುದು ಹಾಲು ಕುಡಿದು ಮಲಗೆಂದು. ಆಗ ಬಿದ್ದುಕೊಂಡ ಸ್ಮೃತಿಯಿಲ್ಲದೆ. ಈಗ ಎದ್ದು ಕೂಗುತ್ತಿದ್ದಾನೆ. ನೀನು ಸ್ವಸ್ಥ ಮಲಗು ಮಗು. ಯಾವ ಭೀತಿಯೂ ಇಲ್ಲ. ನಾನವನಿಗೆ ಸ್ವಲ್ಪ ನೀರು ಕೊಟ್ಟು ಬರುತ್ತೇನೆ" ಎಂದು ನಾಗಿಯು ಲಲಿತೆಯನ್ನು ಸಮಾಧಾನಪಡಿಸಿ ಮಲಗಿಸಿ ಬೆಂಕಿಕಡ್ಡಿ ಕೀರಿ ಚಿಮಣಿ ಹಚ್ಚಿದಳು. ಆದರೆ ಲಲಿತೆಗೆ ಸಮಾಧಾನವಾಗಲಿಲ್ಲ, ಅವಳ ಎದೆಯು ಬಡಬಡನೆ ಬಡೆಯುತ್ತಿತ್ತು. ಅವಳು ಮಲಗಲಾರದೆ ಎದ್ದು ಕೂತಳು. ನಾಗಿಯು ಕೈಯಲ್ಲಿ ಚಿಮಣಿ ಹಿಡಕೊಂಡು ಬಾಗಿಲು ತೆರೆದೊಡನೆಯೇ ಮೂರು ನಾಲ್ಕು ಮಂದಿ ಒಮ್ಮೆಯೇ ಒಳನುಗ್ಗಿದರು.

"ಅಯ್ಯೋ, ಕಳ್ಳರು! ಕಳ್ಳರು!" ಎಂದು ನಾಗಿಯು ದಿಗಿಲುಗೊಂಡು ಚಿಮಣಿಯ ದೀಪವನ್ನು ದಡಕ್ಕನೆ ಕೆಳಗೆ ಹಾಕಿಬಿಟ್ಟಳು. ಅದು ನೊಂದಿ

ಹೋಯಿತು. ಆಗ 'ಬೆಟ್ಟರಿ ಲೈಟಿನ' ವ್ಯಕ್ತಿಯು ಲೈಟನ್ನು ಚಿಮುಕಿಸಿ "ಹಿಡಿಯಿರಿ ರಂಡೆಗಳಿಬ್ಬರನ್ನೂ!" ಎಂದು ಗರ್ಜಿಸಿತು. ಒಡನೆಯೇ ಒಬ್ಬನು ನಾಗಿಯ, ಇನ್ನೊಬ್ಬನು "ಅಯ್ಯೋ ಅಮ್ಮಾ!" ಎಂದು ಥಟ್ಟನೆ ಚಾಪೆಯಿಂದೇಳುವ ಲಲಿತೆಯ ಕುತ್ತಿಗೆಗಳನ್ನೊತ್ತಿಹಿಡಿದರು. ಲಲಿತೆಯು ಮತ್ತೂ 'ಅಯ್ಯೋ' ಎಂದು ಮೊರೆಯಿಡಲು ಅವಳನ್ನು ಹಿಡಿದವನು ತಾನು ಕುತ್ತಿಗೆಗೆ ಸುತ್ತಿದ್ದ ಶಾಲನ್ನೆಳೆದು ಅವಳ ಬಾಯಿಗೆ ತುರುಕಿ ಒತ್ತಿಹಿಡಿದನು. ಅಷ್ಟರಲ್ಲಿ ನಾಗಿಯೂ 'ಅಯ್ಯೋ ಬಿಡಿರಿ!' ಎಂದು ಬೊಬ್ಬೆಹಾಕಿದಾಗ 'ಬೆಟ್ಟರಿಲೈಟಿನ' ವ್ಯಕ್ತಿಯು ನಡುಕಟ್ಟಿನಿಂದ ಬಿಚ್ಚುಕತ್ತಿಯನ್ನೆತ್ತಿಹಿಡಿದು, "ಇದೋ ಜಾಗ್ರತೆ! ಬೊಬ್ಬೆ ಹಾಕಿದರೆ ಕುತ್ತಿಗೆ ಕಡಿದು ಕೊಂದುಹಾಕುವೆನು.! ನಾಯಿಯಂತೆ ನಾನು ಹೇಳಿದ ಹಾಗೆ ಕೇಳಿದೆಯಾದರಾಯಿತು" ಎಂದು ಬೆದರಿಸಿತು. ಬಿಚ್ಚುಕತ್ತಿಯನ್ನು ಕಂಡಾಕ್ಷಣ ನಾಗಿಗೆ ಮಿಂಚುಬಡಿದಂತಾಯಿತು. ತನ್ನನ್ನು ಹಿಡಿದವನ ಕೈಯಿಂದ ಜಾರಿ 'ಬೆಟ್ಟರಿಲೈಟಿ'ನ ವ್ಯಕ್ತಿಯ ಕಾಲಡಿಗೆ ಬಿದ್ದು "ನರಸಿಂಹ ಭಟ್ಟರೇ, ನನಗೇನು ಬೇಕಾದರೂ ಮಾಡಿ. ನನ್ನ ಕುತ್ತಿಗೆಯನ್ನು ಈಗಲೇ ಬೇಕಾದರೆ ಕಡಿದುಹಾಕಿ. ಆದರೆ....ಆದರೆ ನನ್ನ ಮಗು....ನನ್ನ ಮಗು ಲಲಿತೆ" ಎನ್ನುವಷ್ಟರಲ್ಲಿ ನಾಲಿಗೆಯು ಶಕ್ತಿಗುಂದಿ ಒಳಸರಿಯಿತು. "ಈಗೇಕೆ ಕಾಲುಹಿಡಿಯುವೆ ರಂಡೆ! ಸ್ವಾಮಿಗಳಿಗೆ ಮಾತುಕೊಟ್ಟು ಆ ಮೇಲೆ ಅದಕ್ಕೆ ತಪ್ಪಿ ಎಷ್ಟು ಸಲ ಜನಕಳುಹಿಸಿದರೂ ಮಠದ ಬಾಗಿಲಿಗೆ ಬಾರದಿರಲು ಎಷ್ಟರ ಪಿತ್ತವೇರಿರಬೇಕು ನಿನ್ನ ತಲೆಗೆ! ನಿನ್ನ ಮಗಳೊಬ್ಬಳ ಅಹಂಕಾರವೇ ಅಹಂಕಾರವಂತೆ! ಮಾನವಾರಿ ಜೀವಿಸಲು ಅವಳು ಸಿದ್ಧಳಿಲ್ಲಂತೆ. ನೋಡಬೇಕು ಬೀದಿಸೂಳೆಯ ಮಾನ ಎಲ್ಲಿವರೆಗೆ ಬರುತ್ತದೆಂತ!" ಎಂದು ನರಸಿಂಹ ಭಟ್ಟನು ತನ್ನ ಮನುಷ್ಯತ್ವವನ್ನು ಮೂಲೆಗೊತ್ತಿ ಸಿಂಹಸ್ವರೂಪಿಯೇ ಆಗಿ ನಾಗಿಯನ್ನು ಕಾಲ್ಚೆಂಡಿನೋಪಾದಿ ತುಳಿದುಬಿಟ್ಟ. ಇಷ್ಟರಲ್ಲಿ ಅದಾವ ಶಕ್ತಿಯಿಂದಲೋ ಲಲಿತೆಯು ತನ್ನನ್ನು ಹಿಡಿದವನ ಕೈಗಳೆರಡನ್ನೂ ಬಿಡಿಸಿ "ಬೀದಿಸೂಳೆ ಯಾರು ದುರಾತ್ಮಾ?" ಎಂದು ಸಿಂಹಿಣಿಯಂತೆ ನರಸಿಂಹನ ಮೇಲೆ ಹಾರುವಷ್ಟರಲ್ಲಿ ಅವಳನ್ನು ಹಿಡಿದಿದ್ದವನು ಅವಳ ನಡುವನ್ನು ಬಿಗಿಯಾಗಿ ಹಿಡಿದು ಹಿಂಪಕ್ಕೆಳೆದನು. ಲಲಿತೆಯು, 'ಅಯ್ಯೋ' ಎಂದು ಕೂಗಿ ಬೋಧತಪ್ಪಿ ತನ್ನನ್ನು ಹಿಡಿದವನ ಮೇಲೊರಗಿದಳು. ಅವಳ

ಅಯ್ಯೋ ಎಂಬ ಕೂಗು ನೆರೆಕರೆಯವರ ಕರ್ಣಕುಹರಗಳಿಗೆಲ್ಲಾ ಹೊಕ್ಕು ಭಗ್ನ ಮನೋರಥವಾಗಿ, 'ಅಯ್ಯೋ, ಅಯ್ಯೋ, ಅಯ್ಯೋ, ಅಯ್ಯೋ'! ಎಂಬ ನಿರಾಶೆಯ ಪ್ರತಿ ಧ್ವನಿಯಿಂದ ವಾತಾವರಣದಲ್ಲಿ ಕ್ಷೀಣ ಕ್ಷೀಣವಾಗುತ್ತಾ ಲೀನವಾಯಿತು. ಲಲಿತೆಯ ನಡುವನ್ನು ಉಕ್ಕಿನ ಕಟ್ಟನಂತೆ ಬಿಗಿಹಿಡಿದ ನರ ರಾಕ್ಷಸನು ಅವಳು ಪ್ರಜ್ಞೆಗೆಟ್ಟುದನ್ನು ಕಂಡು ಬೆದರಿ ಕೂಡಲೆ ಹಿಡಿತವನ್ನು ಸಡಿಲಿಸಿ ಅವಳನ್ನು ನೆಲಕ್ಕೊರಗಿಸಿದನು. ನರಸಿಂಹ ಭಟ್ಟನ ತುಳಿತದ ಪೆಟ್ಟು ಬಲವಾಗಿ ಕೋಣೆಯ ಗೋಡೆಯ ಬದಿಯಲ್ಲಿ ಅರೆ ಮರವೆಯಿಂದ ಬಿದ್ದು ಹೊರಳಾಡುತ್ತಿದ್ದ ನಾಗಿಯು ಥಟ್ಟನೆದ್ದು "ಅಯ್ಯೋ, ಏನಾಯಿತು? ನನ್ನ ಮಗುವಿಗೇನಾಯಿತು? ಅಯ್ಯೋ ದೇವರೆ!" ಎಂದು ತಲೆತಲೆ ಬಡಕೊಂಡಳು. "ಏನು ನೋಡುತ್ತಿರುವುದು ನೀವು ಕಣ್ಣು ಕಣ್ಣು? ಅವಳು ಬೊಬ್ಬೆಹಾಕುವುದು ಕೇಳುವುದಿಲ್ಲವೇ? ಅವಳನ್ನು ಹಿಡಿದು ವಸ್ತ್ರ ತುರುಕಿ ಬಾಯಿಗೆ! ಕೈಕಾಲು ಕಟ್ಟಿ ಮೋಟರ್‌ಕಾರಿಗೊಯ್ದು ಹಾಕಿ ಮೊದಲು. ಆಮೇಲೆ ಅವಳ ಮಗಳನ್ನೊಯ್ಯಬಹುದು. ಅವರೆಗೆ ಅವಳಿಗೆ ಬೋಧ ಬರುವುದೋ ನೋಡುವ. ಬರದಿದ್ದರೆ ಮಠದಲ್ಲಿ ಬಂದೀತು" ಎಂದು ನರಸಿಂಹನ ಕಟ್ಟಾಜ್ಞೆಯಾಯಿತು. ಕೂಡಲೆ ಇಬ್ಬರು ನಾಗಿಯನ್ನು ಹಿಡಿದು ಅವಳ ಬಾಯಿಗೆ ವಸ್ತ್ರ ತುರುಕ ಹೋದಾಗ, "ಭಟ್ರೇ! ನೀವು ಹೇಳಿದಂತೆ ಕೇಳುವೆನು. ನೀವು ಎಲ್ಲಿಗೆ ಬರಬೇಕೆಂದು ಹೇಳುವಿರೋ ಅಲ್ಲಿಗೆ ಬರುವೆನು. ಆದರೆ ನನ್ನ ಮಗಳಿಗೊಮ್ಮೆ ಬೋಧಬರುವುದೋ ನೋಡಬಿಡಿರಿ. ಸ್ವಲ್ಪ ನೀರು ತಂದು ಅವಳ ಮುಖಕ್ಕೆ ಚಿಮುಕಿಸಬಿಡಿ. ಅವಳ ಪ್ರಾಣ ಹಾರಿಹೋದೀತು! ನಾನು ಮಾಡಿದ ಅಪರಾಧಗಳನ್ನೆಲ್ಲಾ ಕ್ಷಮಿಸಿ ನನಗಷ್ಟೊಂದು ಉಪಕಾರಮಾಡಿ' ಎಂದು ಗೋಳಿಡುತ್ತಾ ನಾಗಿಯು ಪುನಃ ನರಸಿಂಹನ ಕಾಲಿಗೆರಗಿದಳು. 'ಈಗ ಬುದ್ಧಿ ಬಂತೇ? ನಿನ್ನ ಮಗಳೇನೂ ಸತ್ತಿಲ್ಲ. ಆ ಭೀತಿ ಬೇಡ ನಿನಗೆ. ಇದೇ ಬುದ್ಧಿ ಮೊದಲು ಬರುತ್ತಿದ್ದರೆ ಎಷ್ಟು ಮರ್ಯಾದೆಯಿತ್ತು! ಎಷ್ಟು ಸುಖವಿತ್ತು! ನಿನ್ನ ಮಗಳು ಬಹಳ ಹೆಮ್ಮಿನವಳು. ನಾನು ದುರಾತ್ಮನಂತೆ! ಹುಂ ಸೂಳೆಯಿಂದಲೂ ನಾನಾಮಾತು ಕೇಳಬೇಕಾಯಿತು! ಅವಳಿಗೆ ಪ್ರಜ್ಞೆಬಂದರೆ ಪುನಃ ಗಲಾಟೆಮಾಡದಿರಲಿಕ್ಕಿಲ್ಲ. ನಾನು ಹೇಳುವಂತೆ ಕೇಳುವಿಯಾದರೆ ನಾಯಿಯಂತೆ ಹೋಗಿ ಮೋಟರ್

ಕಾರಿನಲ್ಲಿ ಕುಳಿತುಕೋ. ನಿನ್ನ ಮಗಳನ್ನು, ಬಾಯಿಗೆ ವಸ್ತ್ರ ತುರುಕಿಸಿಟ್ಟು ಕೈಕಾಲು ಕಟ್ಟಿಯೇ ಕೊಂಡೊಯ್ಯಬೇಕು. ಎಲ್ಲಿಯಾದರೂ ಮಧ್ಯ ಮಾರ್ಗದಲ್ಲಿ ಬೋಧಬಂದುಬಿಟ್ಟರೆ ಬೊಬ್ಬೆಹಾಕಿಬಿಟ್ಟಾಳು" ಎಂದ ನರಸಿಂಹ ಬೋರ್ಗಲ್ಲೇ ಆಗಿರುವ ಕೊಲೆಗಡುಕ ಹೃದಯದಿಂದ. "ಆಯ್ತಪ್ಪ ನಿಮ್ಮಿಚ್ಛೆಬಂದಂತೆ ಮಾಡಿ" ಎಂದು ನಾಗಿಯು ಚಲಿಸುವ ಗೊಂಬೆಯಂತೆ ಹೊರಗೆ ಸರಿದಾಗ ಕೈದಿಯೋಪಾದಿ ಅವಳ ಎಡಬಲಗಳಲ್ಲಿ ಕೋಣೆಯೊಳಗಿಂದಿಬ್ಬರು ನಡೆದರು. ಮೂರನೆಯವನು ಲಲಿತೆಯ ಬಾಯಿಗೆ ವಸ್ತ್ರ ತುರುಕಿ ಅದರ ಮೇಲೊಂದು ವಸ್ತ್ರವನ್ನು ಬಲವಾಗಿ ಬಿಗಿದು ಹಿಂದೆ ಕುತ್ತಿಗೆಗೆ ಕಟ್ಟಿ ಕೈಕಾಲುಗಳನ್ನು ತಾನು ತಂದಿದ್ದ ಹಗ್ಗದಿಂದ ಗಟ್ಟಿಯಾಗಿ ಬಿಗಿದನು. ಆಗ ಲಲಿತೆಗೆ ಬೋಧೆಯಾಯಿತು. ಕೂಗುವ, ಮತ್ತು ಕೈಕಾಲು ಬಿಡಿಸಿಕೊಳ್ಳುವ ಆವಳ ಪ್ರಯತ್ನವು ನಿಷ್ಫಲವಾಯಿತು.

ಎಷ್ಟು ಮೈ ಕೊಡಹಿದರೂ ಫಲವಾಗಲಿಲ್ಲ. ಕಡೆಗೆ ಸೋತು ಸುಮ್ಮನೆ ಬಿದ್ದುಬಿಟ್ಟಳು. ಕಂಗಳಲ್ಲಿ ಧಾರೆಕಟ್ಟಿ ನೀರು ಹರಿಯತೊಡಗಿತು. ನಿರ್ದುಷ್ಟ ಬಾಲೆಯ ಈ ಕಣ್ಣೀರ ಧಾರೆಯು ಎಂತಹ ಕಠಿಣ ಹೃದಯವನ್ನಾದರೂ ಒಂದೊಮ್ಮೆ ಕರಗಿಸಿ ಬಿಡುತ್ತಿತ್ತು. ಲಲಿತೆಯನ್ನು ಬಿಗಿದು ಕಟ್ಟಿದವನೇ ಆವಳ ಕಣ್ಣೀರನ್ನು ನೋಡಲಾರದೆ ಉಗುಳುವ ನೆವದಿಂದ ಹೊರನಡೆದನು. ಆದರೆ ನರಸಿಂಹ ಭಟ್ಟನು ತನ್ನ ಸಾಹಸಕ್ಕೆ ತಾನೇ ಮೆಚ್ಚಿದ ಸದರ್ಪ ಮುಖ ಮುದ್ರೆಯಿಂದ ಮಂದಸ್ಮಿತನಾಗಿ ಲಲಿತೆಯನ್ನು ನೋಡುತ್ತಾ ನಿಂತನು. ಲಲಿತೆಯ ಕಣ್ಣೀರು, ಕಾವೇರಿ ಕೆಂಡದಂತಾದ ನರಸಿಂಹನ ಹೃದಯ ಕತ್ತಿಯ ಧಾರೆಯನ್ನು ಮತ್ತಷ್ಟು ಗಟ್ಟಿಮಾಡುವ ನೀರಾಗಿ ಪರಿಣಮಿಸಿತು. ಸ್ವಲ್ಪ ಹೊತ್ತಿನಲ್ಲಿ ನಾಗಿಯೊಂದಿಗೆ ಹೋದವರಲ್ಲೊಬ್ಬನೂ ಲಲಿತೆಯನ್ನು ಬಿಗಿದವನೂ ಇಬ್ಬರೂ ತಲೆತಗ್ಗಿಸಿಕೊಂಡು ಒಳಗೆ ಬಂದು ಲಲಿತೆಯನ್ನೆತ್ತಿ ಕೊಂಡೊಯ್ದು ಮೋಟರ್ ಕಾರಲ್ಲಿರಿಸಿದರು. ಅವರ ಹಿಂದೆಯೇ ಹೋದ ನರಸಿಂಹ ಭಟ್ಟನು ನಾಗಿಯ ಕೋಣೆಯ ಮತ್ತು ಮಾರ್ಗದೆದುರಿನ ಬಾಗಿಲೆಳೆದು, 'ವೆಂಕಟು, ವೆಂಕಟು' ಎಂದು ಕರೆದಾಗ ವೆಂಕಟ್ರಮಣನ ಪತ್ತೆಯಿಲ್ಲ. "ನಾವು ಕೋಣೆಯೊಳಗೆ ಪ್ರವೇಶಿಸುವಾಗಲೇ ವೆಂಕಟು ಕುಂಡೆಗೆ ಕಾಲು ಕೊಟ್ಟಿರಬೇಕು" ಎಂದ ಉಳಿದ ಮೂರು ಮಂದಿಯಲ್ಲೊಬ್ಬ. "ಮೂರುಕಾಸಿ

ನವನೆಲ್ಲಿಯೋ! ಇಂತಹ ಘಟಿಂಗರನ್ನು ನಂಬಿಕೊಂಡರಾದೀತು! ಸ್ವಾಮಿ ರೊಬ್ಬರಿಗೆ ಅಂಥವರೇನಂದರೂ ನಂಬಿಗೆಯೇ. ಹೋಗಲಿ ಅವ, ನೀವು ಜಾಗ್ರತೆಯಿಂದ ಇವರಿಬ್ಬರನ್ನೂ ಗಟ್ಟಿ ಹಿಡಕೊಂಡು ಕೂತುಕೊಳ್ಳಿ" ಎಂದು ತಾನು ಡ್ರ್ಯಾವರನ ಸೀಟಿನ ಎಡಗಡೆ ಕೂತು ಕಾರು ಯಾಕೆ ಹೋಗುವುದಿಲ್ಲೆಂದು ನೋಡುವಾಗ ಸ್ಟೀಯರಿಂಗಿನ ಮೇಲೊರಗಿ ನಿದ್ದೆಮಾಡಿದ ಡ್ರ್ಯಾವರನಿಗೆ ಈ ಲೋಕದ ಬೋಧೆಯೇ ಇಲ್ಲ! 'ಹ್ಯೋ ಹ್ಯೋ, ಡ್ರ್ಯಾವರ್ ಸಾಹೇಬ್ರು! ಇದೇನಯ್ಯಾ?'' ಎಂದು ಬೆಟ್ಟರಿ ಲೈಟಿನ ಕಡೆಯನ್ನು ಡ್ರ್ಯಾವರನ ಮೈಗೊತ್ತಿ ಎಬ್ಬಿಸಿದನು. 'ಹಾ........'ಎಂದು ಡ್ರ್ಯಾವರನು ಗೇಣುದ್ದ ಬಾಯಿ ಮಾಡಿ ಆಕಳಿಸಿ ಎರಡೂಅಂಗೈಗಳನ್ನು ಚಕಚಕತಿಕ್ಕಿ ಮುಖ ಸವರಿ "ಆಯ್ತೋ ಸ್ವಾಮಿ? ಹೋಗುವುದೋ?'' ಎಂದ. "ನಮ್ಮ ಕೆಲಸವಾಗಿ ತಾಸು ಅರ್ಧ ವಾಯಿತು. ನೀವು ಎಲ್ಲಿದ್ದೀರೋ ಏನೋ?" ಎಂದು ತಮಾಷೆ ಮಾಡಿದ ನರ ಸಿಂಹ ಮುಗುಳ್ನಗೆ ನಕ್ಕು. "ನಾನು ಕೂಡಾ ನೀವು ಯಾವಾಗ ಬರುತ್ತೀರೆಂದು ಸ್ಟೀಯರಿಂಗ್ ಹಿಡಿದೇ ಕಾದಿದ್ದೆ ಸ್ವಾಮಿ. ಹೋಗಬಹುದಲ್ಲ ಈಗ?'' ಎಂದ ಡ್ರ್ಯಾವರ. "ಹ್ಯೊಶ್, ಬೇಗ ಹೋಗುವ ತಡವಾಯಿತು. ಸ್ವಾಮಿರು ಇನ್ನೆಷ್ಟು ಬೈಯ್ಯುವರೋ? ನಮ್ಮ ಕಷ್ಟ ಅವರಿಗೇನು ಗೊತ್ತು" ಎಂದು ನರ ಸಿಂಹ ಭಟ್ಟನು ಮಾತು ಮುಗಿಸುವಷ್ಟರಲ್ಲಿ ಜರ್ಕನೆ ಮೋಟರ್ ಕಾರು ಸ್ಟಾರ್ಟ್‌ಮಾಡಿ ಓಡಿಸಿಬಿಟ್ಟ ಡ್ರ್ಯಾವರ್.

## ಅಧ್ಯಾಯ ೩

### "ಅಯ್ಯಯ್ಯೋ! ಅಯ್ಯೋ!! ಅ....ಯ್ಯೋ........!"

ಆ ರಾತ್ರಿ ಶಿವಪುರ ಮಠದ ಶಿವಾನಂದ ಸ್ವಾಮಿರಿಗೆ, ತುಸುಹೊತ್ತು ಹಾಸಿಗೆಯಲ್ಲಿ ಮಲಗಿ, ಆ ಮೇಲೆ ಜಗ್ಗನೆದ್ದು ತೀವ್ರ ಅಸಹಿಷ್ಣುತೆಯಿಂದ ರಸ್ತೆಬದಿಯ ಕಿಟಿಕಿಯಿಂದ ಇಣಿಕಿಣಿಕಿ ನೋಡುವುದೊಂದೇ ಕೆಲಸ. ಪ್ರತಿ ಹತ್ತು ನಿಮಿಷಕ್ಕೊಮ್ಮೆ ಎಂಬಂತೆ ಈ ಕ್ರಿಯೆಯನ್ನವರು ಯಾಂತ್ರಿಕವಾಗಿ ನಡೆಸುತ್ತಿದ್ದರು. ಅದೊಂದು ಉತ್ತೇಜಕತೆಯು ಅವರ ನರನಾಡಿಗಳಲ್ಲಿ

ಕುಂಬಿ ಅನುಲೇರಿದವರಿಗಿಂತಲೂ ಕಡೆಯಾಗಿ ಮಾಡಿದ್ದಿತವರನ್ನು. ಮದ ವೇರಿದ ಆನೆಯಂತಾಗಿದ್ದರವರು ಅಂದಿನ ರಾತ್ರಿ. ಅಂದೊಂದು ದಿನ ಶಿವ ಗುಡಿಗೆ, ಶಿವಪೂಜೆಗೆಂದು ತನ್ನ ಗೆಳತಿಯರೊಂದಿಗೆ ಬಂದಿದ್ದ ಲಲಿತೆಯನ್ನು ಕಂಡಂದಿನಿಂದ ಶಿವಾನಂದರ ಹೃದಯದಲ್ಲುಂಟಾಗಿದ್ದ ಕಾಮತೃಷೆಯು ಇಂದು ತೃಪ್ತಿಹೊಂದುವ ನಿರೀಕ್ಷೆಯಿಂದ ಮತ್ತಷ್ಟು ಪ್ರಕೋಪಗೊಂಡು ಹೃದಯ ವನ್ನೇ ಸುಡುತ್ತಿತ್ತು. ಅವರು ಮತಿವಿಕಳರಂತೆ ಆಗಾಗ ಏನೇನೋ ತನ್ನಷ್ಟ ಕ್ಕನೇ ಗುಡುಗುಡಿಸುತ್ತಾ ಕ್ಷೋಭೆಗೊಂಡು ಗಡಗಡ ನಡುಗುತ್ತಿದ್ದರು. ಕಿಟಕಿಯಲ್ಲಿ ಇಣಿಕಿಣಿಕಿ ಸಾಕಾಗಿ ಬುಸ್ಸೆಂದು ಬುಸುಗುಟ್ಟುತ್ತಾ ಹಾಸಿಗೆಯ ಮೇಲೆ ಕೈಕಾಲು ಬಿಟ್ಟು ಮರದ ದಿಂಬಿನಂತೆ ಬಿದ್ದುಬಿಟ್ಟರು. ಇದೇ ರೀತಿ ನಡೆದರೆ ಅವರ ಹೃದಯವೆಲ್ಲಿ ಒಡೆದುಹೋಗುವುದೋ ಎಂದು ಭೀತಿಪಡ ಬೇಕಾಗಿತ್ತು.

ಅಷ್ಟರಲ್ಲಿ ಬಡಬಡ ಬಾಗಿಲು ತಟ್ಟಿದ ಶಬ್ದವಾಯಿತು. ಆ ಶಬ್ದವು ಶಿವಾನಂದರ ಕ್ಷೋಭೆಯನ್ನೆಲ್ಲಾ ಕ್ಷಣಮಾತ್ರದಲ್ಲಿಳಿಸಿ ಬಿಡುವ ಮಂತ್ರಶಕ್ತಿ ಯಾಯಿತು. ಅವರು ಹೊಸ ಜೀವ ಪಡೆದವರಂತೆ ಅತ್ಯುಲ್ಲಾಸದಿಂದ ತಕ್ಷ ಣವೇ ಹಾಸಿಗೆಯಿಂದೆದ್ದು ಬಾಗಿಲು ತೆರೆದು ಅತ್ಯಂತ ಉತ್ಸುಕತೆಯಿಂದ ಕತ್ತು ನೀಡಿ ಹೊರನೋಡಿದರು. ಆಗ ಎದುರಲ್ಲಿ ನರಸಿಂಹ ನಾಗಿಯರು ಮಾತ್ರ ನಿಂತಿರುವುದನ್ನು ಕಂಡು, ಎಷ್ಟೊಂದು ಉತ್ಸಾಹದಿಂದ ಕತ್ತುನೀಡಿದರೋ ಅಷ್ಟೇ ನಿರುತ್ಸಾಹದಿಂದ ಅದನ್ನೊಳಗೆಳೆದು ಬಿಟ್ಟರು. ಸಿಟ್ಟಿನ ಭರದಲ್ಲಿ ಮಾತಾಡುವುದೇನೆಂದು ಅವರಿಗೆ ತಿಳಿಯಲಿಲ್ಲ. ಉಗ್ರ ನರಸಿಂಹರಾಗಿ, ಗೂಡೊಳಗಣ ಹಸಿದ ಸಿಂಹವು ಇನ್ನೂ ತನಗೆ ತಿನ್ನಸಿಗದೆ ಹೊರಗೆಯೇ ತೂಗಾಡಲ್ಪಟ್ಟಿರುವ ಮಾಂಸವನ್ನು ಕಂಡು ಗೂಡಿನ ಸರಳುಗಳ ನಡುವೆ ಬಾಯಿ ಹಾಕಿ ಅಡ್ಡಬರುವ ಸರಳುಗಳನ್ನು ಕಟಕಟನೆ ಕಡಿವಂತೆ, ತನ್ನ ಇಚ್ಛಾಪೂರ್ತಿಗೆ ದೊಡ್ಡ ತಡೆಯಾಗಿರುವ ಸ್ವಾಮಿತ್ವದ ಬಂಧನವನ್ನೇ ಕಟ ಕಟ ಕಡಿವಂತೆ ಹಲ್ಲು ಕಡಿದರು. ಆ ಮೇಲೆ ಉನ್ಮತ್ತನಂತೆ ನರಸಿಂಹ ಭಟ್ಟನ ಹುಲುಸಾಗಿ ಬೆಳೆದ ಜುಟ್ಟನ್ನು ಗಟ್ಟಿಯಾಗಿ ಹಿಡಿದು ಒಳಗೆಳೆದು, "ಈ ರಂಡೆ ಯಾಕೆ? ಅವಳೆಲ್ಲಿ?" ಎಂದು ಗರ್ಜಿಸಿದರು. ನರಸಿಂಹನ ಕಪಾಲವೇ ಎದ್ದು ಬರುವಂತಾಯಿತು. ಅವನು, "ಕ್ಷ—ಕ್ಷ—ಕ್ಷಮಿಸಬೇಕು ಪರಾಕೆ! ಅ—

ಆವಳೂ ಇದ್ದಾಳೆ” ಎಂದು ಮೊರೆಯಿಟ್ಟನು. ನರಸಿಂಹನ ಅವಸ್ಥೆಯನ್ನು ಕಂಡು ಆ ದುಃಖದಲ್ಲಿಯೂ ನಾಗಿಯ ತುಟಿಗಳಲ್ಲಿ ನಗೆಯು ತನ್ನಂತೆ ನೆಗೆದು ಬಂತು. ಅವಳು ಸೆರಗಿನ ತುದಿಯಿಂದ ತುಟಿಗಳನ್ನು ಮರೆಮಾಡಿದಳು. “ಅವಳೂ ಬಂದಿದ್ದಾಳೆ” ಎಂದೊಡನೆಯೇ ನರಸಿಂಹನ ಜುಟ್ಟಿನ ಕೈ ಥಟ್ಟನೆ ಬಿಟ್ಟುಹೋಯಿತು. ಶಿವಾನಂದರ ಉರಿಮುಸಗಿದ ಮುಖಕ್ಕೆ ಫಕ್ಕನೆ ಪನ್ನೀರು ಚೆಲ್ಲಿದಂತಾಯಿತು. ಅವರು ನರಸಿಂಹನ ಕುರಿತು ಮೊದಲು ಎಷ್ಟು ಬೇಗ ಬಹು ಕ್ರೋಧಗೊಂಡಿದ್ದರೂ ಅಷ್ಟೇ ಬೇಗ ಈಗ ಅತ್ಯಂತ ಪ್ರಸನ್ನರಾದರು. “ನೀನು ಹೋದರೆ ಹಾಗೆಯೇ ಹಿಂದೆ ಬರುವುದುಂಟೇ ನರಸಿಂಹ? ಆದರೆ ಆವಳೆಲ್ಲಿ?” ಎಂದು ಬಹಳ ಉತ್ಕಂಠಿತರಾಗಿ ಪ್ರಶ್ನಿಸಿದರು. ನರಸಿಂಹನು ಜುಟ್ಟು ಸರಿಮಾಡಿಕೊಳ್ಳುತ್ತಾ, “ಹೌದೌದು, ಒಮ್ಮೆ ತುಳಿಯುವುದು, ಮತ್ತೊಮ್ಮೆ ತಲೆಯ ಮೇಲೆ ಹೊತ್ತುಕೊಳ್ಳುವುದು! ನನಗಿನ್ನು ಈ ಚಾಕರಿಯೇ ಬೇಡ” ಎಂದ ಸ್ವಲ್ಪ ಎದೆಗೊಂಡು. “ಸಾಕು ಸಾಕು ನಿನ್ನ ಅಧಿಕಪ್ರಸಂಗ! ಅವಳೆಲ್ಲಿರುವಳು ಹೇಳು” ಎಂದರು ಸ್ವಾಮಿರು ಪುನಃ ಸಿಟ್ಟಿನ ನಟನೆಯಿಂದ. “ಅವಳೆಲ್ಲಿರುವಳೆಂದು ಅವಳ ತಾಯಿಯೇ ಹೇಳುವಳು. ಅವಳೊಡನೆಯೇ ಕೇಳಿರಿ” ಎಂದು ನರಸಿಂಹನು ನಾಗಿಯನ್ನು ಒಳಕರೆದನು. ನಾಗಿಯು ಒಳ ಬರುವಾಗಲೆ, “ಪರಾಕೆ, ಕ್ಷಮಿಸಬೇಕು ನಾನು ಮಾಡಿದ ಅಪರಾಧವನ್ನು” ಎಂದು ಸ್ವಾಮಿರ ಪವಿತ್ರ ಪಾದಕ್ಕೆ ತನ್ನಂತಹ ಪಾಪಿಯ ಗಾಳಿ ಕೂಡಾ ಸೋಕಲಾಗದೆಂದು ದೂರದಲ್ಲೇ ಅಡ್ಡಬಿದ್ದಳು. “ಎಲ್ಲಿ, ನಿನ್ನ ಮಗಳೆಲ್ಲಿ ಹೇಳು” ಎಂದು ಮತ್ತಷ್ಟು ಸಿಟ್ಟು ನಟಿಸಿ ಕೇಳಿದರು ಸ್ವಾಮಿರು. “ಮೊದಲು ನನಗೆ ಅಭಯಕೊಟ್ಟರೆ ಆಮೇಲೆ ಅವಳನ್ನು ಕರತರುತ್ತೇನೆ ಪರಾಕೆ” ಎಂದು ನಾಗಿಯು ಕಣ್ಣೀರಿಂದ ಮುಖದಡಿಯ ನೆಲವನ್ನೆಲ್ಲಾ ಒದ್ದೆಮಾಡಿಬಿಟ್ಟಳು. “ಹೂಂ, ಏಳು, ಅವಳನ್ನು ಬೇಗ ಕರೆತಾ” ಎಂದರು ಸ್ವಾಮಿರು ಸ್ವಾಮಿತ್ವದ ಗಾಂಭೀರ್ಯದಿಂದ. ನಾಗಿಯು ಎದ್ದು ಅತಿದೈನ್ಯದಿಂದ, “ಪರಾಕೆ ಅವಳು ಬಹಳ ಎಳೆ ಪ್ರಾಯದವಳು. ಇನ್ನೂ ಶಾಲೆಗೆ ಹೋಗುವ ಹುಡುಗಿ. ಅಲ್ಲಿ ಅವಳ ಟೀಚರೊಬ್ಬಳು ಏನೇನೋ ಅವಳ ತಲೆಗೆ ಹಾಕಿ ಮರುಳುಮಾಡಿರುವಳು. ಆದುದರಿಂದಲೇ ನನಗೆ ಮಾತುಕೊಟ್ಟಂತೆ ನಡೆಯಲಾಗಲಿಲ್ಲ ಬುದ್ಧಿ” ಎಂದು ಹೇಳಿಕೊಂಡಳು. “ಆಯ್ತಾಯ್ತು, ನೀನೀಗ ಹೋಗಿ ಅವಳನ್ನು

ಕರಕೊಂಡು ಬಾ ಬೇಗ" ಎಂದರು ಸ್ವಾಮಿರು ಸ್ವಲ್ಪ ಅಸಹನೀಯತೆಯಿಂದ. ಆದರೆ ನಾಗಿಯು ಅದನ್ನರಿತುಕೊಳ್ಳದೆ "ಪರಾಕೆ" ಎಂದು ಇನ್ನೂ ಮಾತಾಡ ಲಾರಂಭಿಸುವಷ್ಟರಲ್ಲಿ ಸ್ವಾಮಿರು ಆದನ್ನು ಅಷ್ಟರಲ್ಲೇ ನಿಲ್ಲಿಸಿ, "ಸಾಕಿನ್ನು ನಿನ್ನ ಪರಾಕೆಗಿರಾಕೆಯೆಲ್ಲ! ತೊಲಗಿಲ್ಲಿಂದ! ನಿನ್ನ ಮಗಳನ್ನು ಕರಕೊಂಡು ಬಾ" ಎಂದು ಅಬ್ಬರಿಸಿದರು. ನಾಗಿಯು ಬಹಳ ಭೀತಿಗೊಂಡು ತಲ್ಲಣಿಸಿ, "ಅವಳು ಬರಲಿಕ್ಕೆ ಕೇಳುವುದಿಲ್ಲ ಬುದ್ಧಿ. ಮಠಕ್ಕೂ ಅವಳನ್ನು ಕಟ್ಟಿತಂದುದು. ಹುಡುಗಾಟಿಕೆಯವಳು ಬುದ್ಧಿ, ಕ್ಷಮಿಸಬೇಕು" ಎಂದು ಬಗ್ಗಿ ಕೈಜೋಡಿಸಿ ಬೇಡಿಕೊಂಡಳು. "ಹುಂ, ಏನು ಧಿಮಾಕು ರಂಡೆಗೆ! ಹೌದೋ ನರಸಿಂಹ? ಈಗ ಎಲ್ಲಿದ್ದಾಳವಳು?" ಎಂದು ಪ್ರಶ್ನಿಸಿದರು ಸ್ವಾಮಿರು ಕಣ್ಣು ಕೆರಳಿಸಿ. "ಹೌದು ಪರಾಕೆ, ಅವಳೇನು ಸಾಧಾರಣ ಧಿಮಾಕಿನವಳಲ್ಲ. ಕೈಕಾಲು ಕಟ್ಟಿಯೇ ತಂದುದವಳನ್ನು. ಈಗ ಬೈಠಕು ಕೋಣೆಯಲ್ಲಿದ್ದಾಳೆ" ಎಂದ ನರ ಸಿಂಹ. "ನಾಗಿ, ಸಾಧ್ಯವಿದ್ದರೆ ಕರೆತಾ ಆ ರಂಡೆಯನ್ನಿಲ್ಲಿ. ಇಲ್ಲವಾದರೆ ನರಸಿಂಹನು ಜುಟ್ಟು ಹಿಡಿದು ಧರಧರನೆ ಎಳದು ತರುತ್ತಾನೆ" ಎಂದು ಸಿಡುಕಿ ದರು ಸ್ವಾಮಿರು ಹುಬ್ಬುಗಂಟಿಕ್ಕಿ. ನಾಗಿಯು ಬೆದರಿ, "ಬೇಡ ಬುದ್ಧಿ, ಬೇಡ. ನಾನೇ ಕರತರುತ್ತೇನೆ" ಎಂದಳು. "ಹಾಗಾದರೆ ಹೋಗು ನರ ಸಿಂಹ, ಅವಳನ್ನು ಕೋಣೆಗೆ ಕರಕೊಂಡು ಹೋಗು" ಎಂದು ಕೈಬೀಸಿ ಕಟ್ಟಾಜ್ಞೆಯಿತ್ತರು ಸ್ವಾಮಿರು.

ನಾಗಿಯೂ ನರಸಿಂಹನೂ ಸ್ವಾಮಿರ ಬೈಠಕು ಕೋಣೆಗೆ ಹೋಗುವಾಗ ನಾಗಿ ಮಧ್ಯೆ ಸ್ವಲ್ಪ ಹೊತ್ತು ನಿಂತು ಆಲೋಚಿಸಿದಳು. ಆಮೇಲೆ ಏನೋ ನರಸಿಂಹನ ಕಿವಿಯಲ್ಲಿ ಹೇಳಿದಳು. ನರಸಿಂಹನು ಕೋಣೆಯ ಸಂಕೋಲೆ ತೆಗೆದು ಅಲ್ಲಿಂದಲೇ ಎಲ್ಲಿಗೋ ಹೋಗಿಬಿಟ್ಟನು. ನಾಗಿಯೊಬ್ಬಳೇ ಕೋಣೆ ಯೊಳಕ್ಕೆ ಪ್ರವೇಶಿಸಿ ಅತ್ಯವಸರದಿಂದ ಲಲಿತೆಯ ಕೈಕಾಲು ಬಿಟ್ಟು ಬಾಯಿಯ ವಸ್ತ್ರವನ್ನೂ ಬಿಚ್ಚಿತೆಗೆದಳು, ಲಲತೆಯ ಮುಖದ ಮೇಲೆಲ್ಲಾ ಕಣ್ಣೀರು ಹರಿ ಹರಿದು ಗಟ್ಟಿಕಟ್ಟಿ ಹೋಗಿತ್ತು. ಅವಳಿಗೆ ಫಕ್ಕನೆ ಏಳಲು ಸಾಧ್ಯವಾಗಲಿಲ್ಲ. ಆಗ ನಾಗಿಯು,"ಮಗು ಮಗು, ಏಳು ಏಳು, ನಾವು ಮನೆಗೆ ಹೋಗುವ" ಎಂದು ಕೈಹಿಡಿದೆತ್ತಿದಳು. ಮನೆಗೆ ಹೋಗುವ ಎಂದೊಡನೆಯೇ ಲಲಿತೆಗೆ ಒಮ್ಮೆಯೇ ಹೊಸ ಜೀವ ಬಂದ ಹಾಗಾಯಿತು. "ಹೋಗುವ ಅಮ್ಮಾ, ಬೇಗ

ಹೋಗುವ. ಆದುರಾತ್ಮರೆಲ್ಲಿ? ನಮ್ಮನ್ನವರು ಹೋಗಬಿಡುವರೇ?"ಎಂದಳವಳು ಬೆದರಿ ಕಂಗೆಟ್ಟ ಮರಿ ಹುಲ್ಲೆಯಂತಹ ಭೀತ ದೀನ ದೃಷ್ಟಿಯಿಂದ. ತಾಯಿಯು ಮಾತು ಸತ್ಯವೆಂದೇ ಬಗೆದಿದ್ದಳವಳು. ಒಂದೇಸವನೆ ನಾಗಿಯ ಕಂಗಳಲ್ಲಿ ಧರಧರನೆ ನೀರು ಹರಿಯಹತ್ತಿತು. ಅವಳ ಕಂಠವು ಕಟ್ಟಿಹೋಯಿತು. ಆವಳು ಲಲಿತೆಯನ್ನು ಬಿಗಿದಪ್ಪಿ ಬಾಯ್ಬಿಟ್ಟು ಅಳತೊಡಗಿದಳು. "ಅಮ್ಮಾ, ಅದೇಕೆ ಅಳುವೆ? ಹೋಗುವ ಮನೆಗೆ ಬೇಗ. ಮತ್ತೆ ಆ ದುಷ್ಟರೆಲ್ಲಿಯಾದರೂ ಪೀಡೆಕೊಟ್ಟರೆ?" ಎಂದಳು ಲಲಿತೆ ತಾಯಿಯ ಮರುಕವನ್ನು ಕಂಡು ವಿಸ್ಮಯ ಗೊಂಡು. ಅವಳಿಗೇನು ಗೊತ್ತು ನಾಗಿಯ ಅಂತರಂಗದ ತಳಮಳದ ಸಂಗತಿ? ನಾಗಿಯು ಕೋಣೆಗೆ ಬರುವಾಗ ಮಾಡಿದ ದೃಢನಿರ್ಧಾರವು ಲಲಿತೆಯನ್ನು ಕಂಡೊಡನೆಯೇ ಕರಗಿ ನೀರಾಯಿತು. ಅವಳು ಚಿಕ್ಕ ಮಗುವಿನಂತೆ ಅಳ ತೊಡಗಿದಳು. ಆಮೇಲೆ ಸ್ವಾಮಿಯು ಮತ್ತೇನು ಮಾಡುವರೋ ಎಂದು ಭಯವಿಹ್ವಲಳಾಗಿ ದೇವರಿಟ್ಟಂತಾಗುತ್ತದೆಂದು ಒಳಗೊಳಗೇ ಅಂದು "ಹೋಗುವ, ಮಗು ಹೋಗುವ" ಎಂದು ಕಂಬನಿ ತುಂಬಿದ ಕಂಗಳಿಂದ ಲಲಿತೆಯನ್ನ ರೆಕ್ಷಣ ದಿಟ್ಟಿಸಿ ಕೂಡಲೆ ದೃಷ್ಟಿ ತಿರುಗಿಸಿ ದುಃಖದ ಆವೇಗವನ್ನು ಒತ್ತಿಟ್ಟುಕೊಂಡಳು. ಮಾತೆಯ ಪ್ರೇಮದ ಕರುಳನ್ನು ಭೀತಿಯು ಕತ್ತರಿಸಿ ಹಾಕಿತು. ಕೈ ಹಿಡಿದು ಲಲಿತೆಯನ್ನು ಕರದೊಯ್ದು ಸ್ವಾಮಿಯ ಶಯ್ಯಾಗೃಹದ ಬಳಿಗೆ ಹೋಗಿ ನಿಂತು ತುಸು ಯೋಚಿಸಿದಳು. ಆ ಮೇಲೆ ದೀರ್ಘ ಶ್ವಾಸ ಬಿಟ್ಟು ಟಪ್ ಟಪ್ ಬಾಗಿಲು ಬಡೆದಳು. ಸಾಸಿವೆ ಬಿದ್ದರೂ ಗಟ್ಟಿಯಾಗಿ ಕೇಳಿ ಜಗ್ಗನೇಳುವಷ್ಟರ ಉತ್ಕಂಠಿತರಾಗಿದ್ದ ಶಿವಾನಂದರು ಒಡನೆಯೇ ಹಾಸಿಗೆ ಯಿಂದ ದಡಬಡನೆ ಎದ್ದು ಓಡಿಹೋಗಿ ಬಾಗಿಲು ತೆರೆದರು. ಅವರೊಂದಿ ಗೇನೇ ದೀಪದ ಬೆಳಕು ಹೊರಚಿಮ್ಮಿತು. ಶಿವಾನಂದರ ಭೀಮಕಾಯವನ್ನು ಕಂಡೊಡನೆಯೇ ಲಲಿತೆಯು ದಿಗಿಲುಗೊಂಡು, "ಅಮ್ಮಾ" ಎಂದು ಚೀರಿ ನಾಗಿ ಯನ್ನಪ್ಪಿ ಹಿಡಿದಳು. ಅಷ್ಟರಲ್ಲಿ ಶಿವಾನಂದರು, ಎತ್ತರದಲ್ಲೆಲ್ಲಿಯೋ ಕಾದಿದ್ದು ಅನುಕೂಲ ಸಂದರ್ಭ ದೊರೆತಾಗ ಒಮ್ಮೆಯೇ ನೆಲಕ್ಕೆರಗಿ ಕೋಳಿಮರಿ ಯನ್ನೆತ್ತಿ ಹಾರುವ ಗಿಡುಗನಂತೆ, ದಟ್ಟ ಪೊದರುಗಳೊಳಗೆ ಅವಿ ತಿದ್ದು ಸಂದರ್ಭ ನೋಡಿ ಥಟ್ಟನೆ ಹುಲ್ಲೆಯ ಮೇಲೆ ಹಾರಿ ಕಚ್ಚಿಕೊಂಡೊ ಯ್ಯುವ ಹಸಿದ ಹುಲಿಯಂತೆ, ಲಲಿತೆಯನ್ನು ರಟ್ಟೆಹಿಡಿದು ಎಳದೊಯ್ದು,

ನಾಗಿಯು "ಬುದ್ಧಿ! ಪರಾಕೆ!!" ಎನ್ನುವಷ್ಟರಲ್ಲಿ ದಡಕ್ಕನೆ ಬಾಗಿಲು ಹಾಕಿ ಬಿಟ್ಟರು. ನಾಗಿಗೆ ಜೀವ ಹಾರಿದಂತಾಯಿತು. ಅವಳು ಗೋಡೆಗೆ ಕೈಗೊಟ್ಟು ನಿಲ್ಲಲೆತ್ನಿಸಿ ನಿಲ್ಲಲಾರದೆ ಜಾರಿ ನಿಶ್ಚೇತನಳಾಗಿ ಬಿದ್ದುಬಿಟ್ಟಳು. ಹಿಂದಿನಿಂದಲೇ ಕತ್ತಲೆಯ ಮರೆಯಲ್ಲಿದ್ದ ಧಾಂಡಿಗ ನರಸಿಂಹನು ಅವಳನ್ನೆಲ್ಲಿಗೋ ಹೊತ್ತುಕೊಂಡು ಹೋದನು.

ಷಡ್ವೈರಿಗಳಲ್ಲಿ ಮತ್ತಾವುದೂ ಕಾಮದಷ್ಟು ವಿಚಾರ ಕುರುಡಲ್ಲ. ಕಾಮೋದ್ರಿಕ್ತ ಮಾನವನು ನರ ಪಿಶಾಚಿಯು. ಎಂತಹ ಭೀಕರ ಕೃತ್ಯವನ್ನಾದರೂ ಮಾಡಹೇಸನವನು. ಇನ್ನೂ ಬಹಳ ಎಳೆ ವಯಸ್ಸಿನವಳಿದ್ದು ನಿರ್ದುಷ್ಟ ನಿರ್ಮಲ ಹೃದಯಳಿರುವ ಬಡ ಹುಡುಗಿ ಲಲಿತೆಗೆ ದಷ್ಟಪುಷ್ಟನಾಗಿ ಕೊಬ್ಬಿ ಬೆಳೆದು ಕಾಮೋನ್ಮತ್ತನಾಗಿದ್ದ ಶಿವಾನಂದನು ಎಂತಹ ಉಪಟಳವನ್ನೆಲ್ಲಾ ಕೊಟ್ಟು, ಯಾವ ರೀತಿಯಲ್ಲಿ ಅವಳನ್ನು ಬಲಾತ್ಕರಿಸಿ ಅವಳ ಮೇಲೆ ಪೈಶಾಚಿಕ ಅತ್ಯಾಚಾರ ನಡೆಸಿದನೆಂಬುದನ್ನೆಲ್ಲಾ ವಿವರಿಸಲು ನಮ್ಮ ಲೇಖನಿಯು ಹೇಸುವುದು. ಅವನು ಲಲಿತೆಯನ್ನೆಳದೊಯ್ದು ಸುಮಾರು ಅರ್ಧ ತಾಸಿನಲ್ಲಿ 'ಅಯ್ಯಯ್ಯೋ! ಅಯ್ಯೋ! ಅ....ಯ್ಯೋ...........!' ಎಂಬ ಹೃದ್ದ್ರಾವಕ ಚೀತ್ಕಾರವು ಆ ಕರಾಳ ರಾತ್ರಿಯ ಗುಪ್ತ ಮುಸುಕನ್ನು ಕೆಲವೆಡೆ ಹರಿದುಬಿಟ್ಟಿತು. ನರಸಿಂಹನು ಸ್ವಾಮಿಯರ ಬೈಠಕು ಖಾನೆಯ ಹೊರಗಣ ಜಗಲಿಯಲ್ಲಿ ಆಗತಾನೆ ಮಲಗಿ ಕಣ್ಣಿಗೆ ಅಮಲು ಹಿಡಿಯುವಷ್ಟರಲ್ಲಿ ಎದ್ದ ಈ ಚೀತ್ಕಾರವು ಅವನನ್ನು ಹೊಡೆದೆಬ್ಬಿಸಿತು. ಸ್ವಾಮಿಯರಿಗೆ ತನ್ನ ಸಹಾಯವೇನಾದರೂ ಬೇಕಾಗುವುದೋ ಎಂದು ಅವನು ಅವರ ಮಲಗುವ ಕೋಣೆಯ ಕಡೆಗೆ ಅವಸರವಸರದಿಂದ ಕಚ್ಚೆಕಟ್ಟಿಕೊಂಡು ಧಾವಿಸುವಷ್ಟರಲ್ಲಿ, "ಅಯ್ಯೋ! ಮಗು, ಲಲಿತ! ಲಲಿತ!! ಏನಾಯಿತು! ಏನಾಯಿತು!! ಹಾ ಪರಮೇಶ್ವರ ನನ್ನ ಲಲಿತೆಯನ್ನು ಕಾಪಾಡು, ಕಾಪಾಡು" ಎಂದು ಸ್ವಾಮಿಯರ ಬೈಠಕು ಕೋಣೆಯೊಳಗಿಂದ ನಾಗಿಯು ಗೋಳಿಟ್ಟಳು. ನರಸಿಂಹನು ಥಟ್ಟನೆ ಹಿಂದಕ್ಕೆ ಸರಿದು ಬೈಠಕು ಕೋಣೆಯ ಸಂಕೋಲೆ ತೆಗೆದು ದಢಲ್ಲನೆ ಬಾಗಿಲು ದೂಡಿದನು. ಬಂದವರು ಸ್ವಾಮಿಯರೆಂದು ಬಗೆದು ನಾಗಿಯು "ಪರಾಕೆ, ಅಯ್ಯಯ್ಯೋ! ಅಯ್ಯೋ!! ಅಯ್ಯೋ!!! ಎಂದು ಕೂಗಿದುದಾರು? ಲಲಿತೆಗೇನು ಮಾಡಿದಿರಿ? ಅವಳೆಲ್ಲಿರುವಳು? ದಯಮಾಡಿ ಅವಳನ್ನೊಮ್ಮೆ ನನಗೆ ತೋರಿಸಿ

ಬುದ್ಧಿ" ಎಂದು ದೊಪ್ಪನೆ ಬಿದ್ದು ಸಾಷ್ಟಾಂಗ ವಂದನೆಮಾಡಿದಳು. ಆ ಸಂದರ್ಭದಲ್ಲೆ ಶಿವಾನಂದರು, 'ನರಸಿಂಹ! ನರಸಿಂಹ!! ಎಂದು ಗಂಟಳೊಳಗೇನೇ ಕರೆಯುತ್ತಾ ಅಲ್ಲಿಗೋಡಿಬಂದರು. "ಏನಾಯಿತು, ಏನಾಯಿತು ಪರಾಕೆ?" ಎಂದು ಪ್ರಶ್ನಿಸಿದ ನರಸಿಂಹ ದಿಗಿಲುಗೊಂಡು. ಆಗ ನಾಗಿಯು ಎದ್ದು ನಿಂತುದನ್ನು ಕಂಡು ಶಿವಾನಂದರು, ತನ್ನ ಆವೇಗದ ವೇಗಕ್ಕೆ ಫಕ್ಕನೆ ಬ್ರೇಕ್ ಹಾಕಿ,"ಏನಿಲ್ಲ. ಲಲಿತೆಗೆ ಚೆನ್ನಾಗಿ ನಿದ್ದೆ ಹತ್ತಿದೆ. ಅವಳು ಬಹಳ ದಣಿದಿರಬೇಕು ಪಾಪ ನೀವು ಕೊಟ್ಟ ಉಪಟಳದಿಂದ. ಅದಂತಿರಲಿ. ಅದಾರು ನರಸಿಂಹ 'ಅಯ್ಯೋ! ಅಯ್ಯೋ!!' ಎಂದು ಕೂಗಿದುದು? ಮಠದೊಳಗೋ ಹೊರಗೋ?" ಎಂದು ಉತ್ಸುಕತೆಯ ನಟನೆಯಿಂದ ಕೇಳಿದರು. ಸ್ವಾಮಿರ ಇಂಗಿತವನ್ನು ನರಸಿಂಹನು ಆಕ್ಷಣ ಅರಿತುಕೊಂಡನು. ಅವನ ತುಟಿಗಳ ಮೇಲೆ ಹುಸಿನಗೆ ಎದ್ದು ನಲಿಯತೊಡಗಿತು "ಯಾರೋ ನಿದ್ದೆಯಲ್ಲಿ ಕನಸುಬಿದ್ದು ಕೂಗಿರಬೇಕು ಪರಾಕೆ. ಅದಕ್ಕಾಗಿ ನೀವೇನೂ ತಳಮಳಿಸಬೇಕಾಗಿಲ್ಲ. ನೀವು ಹೋಗಿ ಮಲಗಿ ಬುದ್ಧಿ. ಬಹಳ ರಾತ್ರಿಯಾಯಿತು. ನಾಗಿ, ಇನ್ನಾದರೂ ತಿಳಿಯಿತೆ ನಿನ್ನ ಮಗಳು ಸುಖವಾಗಿದ್ದಾಳೆಂದು? ಸ್ವಾಮಿರೇನು ಸುಳ್ಳುಹೇಳಲಿಕ್ಕಿಲ್ಲವಲ್ಲ? ಮಲಗು, ಮಲಗು, ಬೆಳಿಗ್ಗೆ ಐದು ಘಂಟೆಗೇನೇ ಎದ್ದು ಹೋಗಬೇಕು"ಎಂದ ನರಸಿಂಹ ಸ್ವಾಮಿರ ಮುಖದ ಕಡೆಗೆ ಓರೆನೋಟಬೀರಿ "ಅಷ್ಟಾದರೆ ಸರಿಯಪ್ಪ ಭಗವಂತ! ಹೋಗಿ ಬುದ್ಧಿ ಮಲಗಿ, ನಾನೂ ಮಲಗುತ್ತೇನೆ. ಆದಷ್ಟು ಬೇಗ ನಮ್ಮನ್ನು ಮನೆಗೆ ಕಳುಹಿಸಿಬಿಡಿ." ಎಂದಳು ನಾಗಿ ಅತಿ ನಮ್ರಭಾವದಿಂದ. ಸ್ವಾಮಿರೂ ನರಸಿಂಹನೂ ಕೂಡಲೆ ಹೊರಗೆ ನಡೆದರು. ನರಸಿಂಹನು ಕೈತಕು ಕೋಣೆಯ ಬಾಗಿಲೆಳೆದು ಹೊರಗಣ ಸಂಕೋಲೆ ಸಿಕ್ಕಿಸಿದ.

ಅಷ್ಟರಲ್ಲಿ ಜಗಲಿಯ ಒಂದು ಮೂಲೆಗೆ ಸರಿದಿದ್ದ ಸ್ವಾಮಿರು "ಇಲ್ಲಿ ಬಾ ನರಸಿಂಹ, ಬೇಗ ಬಾ" ಎಂದು ದೊಡ್ಡ ಅನಾಹುತವಾಗಿ ಕಂಗೆಟ್ಟ ತಳಮಳ ದಿಂದ ಕರೆದರು. ನರಸಿಂಹನು,"ಪರಾಕೆ, ಏನು, ಏನಾಯಿತು?" ಎನ್ನುವಷ್ಟರಲ್ಲಿ, ಆ ಜಗಲಿ ಬಳಿಯ ಕೋಣೆಯೊಳಗಿಂದ,"ನಾಗವೇಣಿ! ನಾಗವೇಣಿ!! ಯಾರೆ ಅದು 'ಅಯ್ಯೋ! ಅಯ್ಯೋ!!' ಎಂದು ಕೂಗಿದ್ದು? ಶಿವ ಶಿವ, ಈ ಮಠದೊಳಗೆ ಏನೆಲ್ಲಾ ನಡೆಯುತ್ತದೋ ಏನೋ? ದೇವರೇ ಗತಿ!" ಎಂಬ ಮುದುಕಿ ಯೊಬ್ಬಳ ಮಾತು ಅವರಿಬ್ಬರನ್ನೂ ಮೌನಗೊಳಿಸಿಬಿಟ್ಟಿತು. "ಮಲಗಮ್ಮ

ಸುಮ್ಮನೆ ಮಲಗು. ಯಾರೋ ಕನವರಿಸಿ ಕೂಗಿರಬೇಕು" ಎಂದಳು ಇನ್ನೊಬ್ಬಳು ಹೆಂಗಸು. ಹಾ...........ಎಂದು ಬಾಯಿ ಆಕಳಿಸಿ, "ಶಿವಶಿವ, ಶಂಭೋ ಶಂಕರ, ಪರಮೇಶ್ವರ" ಎಂದು ಮಲಗಿತು ಮುದುಕಿ. "ಆ ಮುದುಕಿ ಮತ್ತು ಅವಳ ಮಗಳನ್ನು ನಾಳೆಯೇ ಮಠದಿಂದ ಹೊರಡಿಸಿಬಿಡಬೇಕು ನರಸಿಂಹ! ಬಹಳ ಅಧಿಕಪ್ರಸಂಗಿಯದು" ಎಂದು ಶಿವಾನಂದರು ಮುದುಕಿಯ ಮೇಲೆ ಮುನಿದುಬಿದ್ದರು. "ಆ ಮುದುಕಿಗೆ ಬೆಂಕಿಹಾಕಲಿ ಪರಾಕೆ! ಲಲಿತೆಗೇನಾಯಿತು? ಅವಳೇಕೆ ಕೂಗಿದುದು?" ಎಂದು ಆತುರದಿಂದ ಕೇಳಿದ ನರಸಿಂಹ. "ನರಸಿಂಹ, ಈಕ್ಷಣ ಮೋಟರ್‌ಕಾರಿನಲ್ಲಿ ಹೋಗಿ ಡಾಕ್ಟರ್ ಗಂಗಾಧರರಾಯರನ್ನು ಕರಕೊಂಡು ಬರಬೇಕು. ಲಲಿತೆಗೆ ಸ್ಮೃತಿತಪ್ಪಿ ಹೋಗಿರುವುದು. ನರಸಿಂಹ, ನಾನೀಗ ಏನು ಮಾಡುವುದು? ಡಾಕ್ಟರರು ಬಂದು ನೋಡಿದರೆ ಹೇಸಿಕೆಯಾಗುವುದಲ್ಲ? ಒಬ್ಬರಿಗೂ ಈ ಸಂಗತಿ ತಿಳಿಯದಂತಾಗಬೇಕು ನೋಡು. ಅದಕ್ಕಾಗಿ ಎಷ್ಟು ವೆಚ್ಚವಾದರೂ ಚಿಂತೆಯಿಲ್ಲ. ನೀನೀಗ ಏನುಮಾಡುವೆ? ಉಪಾಯವೇನಿದಕ್ಕೆ?" ಎಂದರು ಶಿವಾನಂದರು ಸಂಪೂರ್ಣ ಧೃತಿಗೆಟ್ಟು. ಆ ಚಳಿಯಲ್ಲಿಯೂ ಅವರ ಶರೀರವು ಬೆವರಿಹೋಗಿತ್ತು. ಕೈಕಾಲುಗಳು ಕಂಪಿಸುತ್ತಿದ್ದುವು. ಭೀತಿಯಿಂದ ಕಣ್ಣುಗಳು ಕಳೆಗುಂದಿಹೋಗಿದ್ದುವು. ಮುಖವು ಬಿಳುಪೇರಿಹೋಗಿತ್ತು. "ಹೆದರಬೇಡಿ ಬುದ್ಧಿ ಹೆದರಬೇಡಿ. ಎಲ್ಲಾ ನಾನು ಉಪಾಯಮಾಡುತ್ತೇನೆ. ಮೊದಲು ನಾನವಳನ್ನೊಮ್ಮೆ ಪರೀಕ್ಷಿಸಿಕೊಳ್ಳುತ್ತೇನೆ" ಎಂದ ನರಸಿಂಹ ಒಂದಿಷ್ಟು ಗಲಿಬಿಲಿಗೊಳ್ಳದೆ. "ಬೇಡ ಬೇಡ ನರಸಿಂಹ, ಮೊದಲು ಡಾಕ್ಟರರನ್ನು ಕರಕೊಂಡುಬಾ" ಎಂದರು ಶಿವಾನಂದರು. "ಅಲ್ಲ ಪರಾಕೆ, ನೀವು ಸ್ಮೃತಿ ತಪ್ಪಿದೊಡನೆಯೇ ಬೆದರಿ ಅವಳನ್ನು ಬಿಟ್ಟುಬಂದಿರಿ. ಅದರಲ್ಲೇನೂ ಭೀತಿಯಿಲ್ಲ. ಅವಳಿಗೀಗ ಪ್ರಜ್ಞೆ ಬಂದೀತು. ಇದು ಹೊರತು ಅವಳನ್ನು ನಿಮ್ಮ ಶಯ್ಯಾಗೃಹದಲ್ಲೆ ಇರಿಸಿ ಡಾಕ್ಟರರನ್ನು ಅಲ್ಲಿಗೆ ಕರತರಲಾಗುವುದೇ? ನಾನವಳನ್ನು ಇನ್ನೊಂದು ಕೋಣೆಗೊಯ್ದು ಆ ಮೇಲೆ ಡಾಕ್ಟರರನ್ನು ಕರತರಲು ಹೋಗುತ್ತೇನೆ ಆಗದೇ?" ಎಂಬ ನರಸಿಂಹನ ಪ್ರಶ್ನೆಯಿಂದ ಶಿವಾನಂದರ ಮನಸ್ಸಿನ ಗೊಂದಲವು ಸ್ವಲ್ಪ ಕಡಿಮೆಯಾಯಿತು. "ಆಯ್ತಾಯ್ತು ನರಸಿಂಹ. ಅಂತೆಯೇ ಮಾಡು. ನಿನ್ನುಪಕಾರ ನಾನೆಂದಿಗೂ ಮರೆಯಲಾರೆ"

ಎಂದರವರು ಕೃತಜ್ಞತೆಯ ಪ್ರತಿಮೂರ್ತಿಯೇ ಆಗಿ.

ನರಸಿಂಹನು ಒಡನೆಯೇ ಶಿವಾನಂದರ ಕೋಣೆಯೊಳಗೆ ಧಾವಿಸಿದ. ಹೋಗಿ ನೋಡುವುದೇನನ್ನು! "ಶಿವ! ಶಿವ!!" ಎಂದು ಅವನ ಪೈಶಾಚಿಕ ಹೃದಯವೂ ತಲ್ಲಣಿಸಿತು. ಶಿವಾನಂದರ ಹಾಸಿಗೆಯೆಲ್ಲಾ ರಕ್ತಮಯ ವಾಗಿತ್ತು. ಲಲಿತೆಯು ಹೆಣದಂತೆ ಬಿದ್ದಿದ್ದಳು. ಅವನು ತುಸು ಹತ್ತಿರ ಹೋಗಿ ನೋಡಿದ. ಅವನಲ್ಲೂ ಜುಗುಪ್ಸೆಯುಂಟಾಯಿತು. ಆತನು ಕೂಡಲೆ ಹೊರ ನಡೆದು ಬಾಗಿಲುಹಾಕಿ ಏನೇನೋ ಯೋಚಿಸುತ್ತಾ ಶಿವಾನಂದರ ಬಳಿಗೆ ನಡೆದು, "ಆಗುವುದಿಲ್ಲ ಪರಾಕೆ. ನನ್ನಿಂದವಳನ್ನು ಎತ್ತಿತರಲು ಸಾಧ್ಯವಿಲ್ಲ. ನಾನೀಗ್ಗ ಕೂಡಲೆ ಡಾಕ್ಟರರನ್ನು ಕರತರುತ್ತೇನೆ. ಅವರಿಂದ ಸಂಗತಿಯನ್ನು ಮುಚ್ಚುಮರೆ ಮಾಡಿ ಫಲವಿಲ್ಲ. ಹೇಗೂ ಅವರಿಗೆ ತಿಳಿಯದಿರುವುದಿಲ್ಲ. ಈ ರಾತ್ರಿಗೆ ಅವರು ಬರಲೊಪ್ಪುತ್ತಾರೋ ಇಲ್ಲವೋ?" ಎಂದು ನರಸಿಂಹ ಹೊರಡು ವಷ್ಟರಲ್ಲಿ ಶಿವಾನಂದರು 'ನಾನು ಹೇಳಿದೆನೆಂದು ಹೇಳು. ಅವರು ಕೇಳಿದಷ್ಟು ಹಣ ಕೊಡಬಹುದು" ಎಂದರು. ನರಸಿಂಹನು "ಹೂಂ ಹೂಂ" ಎಂದು ಬೇಗ ಬೇಗನೆ ಹೊರಟುಹೋದನು.

---

## ಅಧ್ಯಾಯ ೪

### "ಅದೋ ಸುಮಿತ್ರಾಬಾಯಿಯವರು ಬಂದರಮ್ಮಾ! ನಾನೇನು ಮಾಡಲಿ! ನಾ—ನೇ—ನು ಮಾ ಡ ಲಿ !"

ಸುದ್ದಿಯಷ್ಟು ದೊಡ್ಡ ಮತ್ತು ಶೀಘ್ರ 'ನ್ಯೂಸ್ ಏಜೆನ್ಸಿ'ಯು ಲೋಕದಲ್ಲಿ ಮತ್ತಾವುದೂ ಇಲ್ಲ. ಅದು ಎಷ್ಟೊಂದು ಚಮತ್ಕಾರವಾಗಿ ತನ್ನ ಕೆಲಸ ವನ್ನು ನಡಿಸಿಬಿಡುವುದು! ಮಾನವನ ಸ್ವಭಾವಸಿದ್ಧ ಉತ್ಸುಕತೆಯೇ ಸುದ್ದಿಯ 'ರೇಡಿಯೋ' ಯಂತ್ರದ ವಿದ್ಯುಚ್ಛಕ್ತಿ. ಯಾವ ಪ್ರತಿಫಲದ ಆಶೆಯೂ ಇಲ್ಲದೆ, ಸಂಬಳಕ್ಕೆ ದುಡಿಯುವವರಿಗಿಂತ ಎಷ್ಟೋ ಹೆಚ್ಚಿನ ಉತ್ಸಾಹ ಮತ್ತು ಚಾತುರ್ಯದಿಂದ ಸುದ್ದಿಯ ವಾರ್ತಾವಾಹಕರು ತಾವಾಗಿ ಕೆಲಸನಡೆಸಿ

ಬಿಡುವರು. ಅವರ ವಿಶಿಷ್ಟತೆಯೆಂದರೆ ಗುಟ್ಟನ್ನು ಗುಟ್ಟಾಗಿಯೇ ಬಯಲು ಮಾಡುವುದು. ಎಂತಹ ನಿಗೂಢವಾಗಿರುವ ರಹಸ್ಯವನ್ನಾದರೂ ಅವರು ಭೇದಿಸಿ ಬಯಲುಮಾಡಿಬಿಡುವರು. ಕಟ್ಟಕಡೆಗದು ಬಯಲು ರಹಸ್ಯವಾಗುವುದು. ಅಂತೆಯೇ ಶಿವಾನಂದರು ಅತಿ ರಹಸ್ಯವಾಗಿರಿಸಬೇಕೆಂದು ಅಷ್ಟೊಂದು ಚಡಪಡಿಸಿದ್ದ ಗುಟ್ಟು ಮರುದಿನ ಬೆಳಗ್ಗೆಯೇ ಶಿವಪುರಿಯಲ್ಲೆಲ್ಲಾ ಗುಜು ಗುಜು ಹಬ್ಬಿತ್ತು. ಎಲ್ಲೆಲ್ಲಿಯೂ ಅದೇ ಸುದ್ದಿ, ಅದೇ ಮಾತು. ಮಠದೊಳಗಣ ಗುಪ್ತ ಕೋಣೆಯೊಳಗೆ ಅಪರ ರಾತ್ರಿಯ ಮುಸುಕಿನಲ್ಲಿ ಅತಿ ಗೋಪ್ಯವಾಗಿ ನಡೆದ ಈ ರಹಸ್ಯವು ಬಯಲಾದ ಬಗೆಯಾದರೂ ಹೇಗೆ?

ನರಸಿಂಹಭಟ್ಟನು ಶಿವಾನಂದರ ಸೂತ್ರದ ಗೊಂಬೆ. ಆ ಗೊಂಬೆ ಎಂದೆಂದಿಗೂ ಗುಟ್ಟು ಹೊರಗೆ ಬಿಡಲಾರದು. ನರಸಿಂಹನು ಡಾಕ್ಟರರನ್ನು ಕರಕೊಂಡುಬರಲು ಮಠದಿಂದ ಹೊರಬಿದ್ದು 'ಬೆಟ್ಟರಿಲೈಟ್' ಚಮುಕಿಸಿದೊಡನೆಯೇ ಡ್ರ್ಯಾವರನು, "ಹಾಂ, ಬನ್ನಿ ಸ್ವಾಮಿ ಇನ್ನೆಲ್ಲಿ ಹೋಗಬೇಕು?" ಎಂದು ಕೂಡಲೆ ಕಾರಿನ ದೀಪ ಬೆಳಗಿಸಿದನು. ಶಿವಾನಂದರ ದುಷ್ಕೃತ್ಯಗಳ ಅತಿ ನಿಪುಣ ಕೈಯಾಗಿದ್ದ ವೆಂಕಟ್ರಮಣನೂ ಆ ಸಂದರ್ಭದಲ್ಲಿ ಅಚಾತುರ್ಯದಿಂದ, "ಡ್ರ್ಯಾವರ್, ಈಕ್ಷಣ ಹೋಗಬೇಕು ಡಾಕ್ಟರ್ ಗಂಗಾಧರರಾಯರಲ್ಲಿಗೆ. ಸ್ಟಾರ್ಟ್‌ಮಾಡು" ಎಂದು ಮೋಟರಿನ ಬಾಗಿಲು ತೆರೆದು ಒಳ ಕೂತನು. ಈ ಅಚಾತುರ್ಯವೇ ಸುದ್ದಿಯ ದೂತನನ್ನೆಬ್ಬಿಸಿಬಿಟ್ಟಿತು. ಡ್ರ್ಯಾವರನು ಮೋಟರ್ ಸ್ಟಾರ್ಟ್ ಮಾಡುವುದನ್ನೇ ಬಿಟ್ಟು "ಯಾಕೆ ಸ್ವಾಮಿ ಈ ರಾತ್ರಿಗೆ ಡಾಕ್ಟರರಲ್ಲಿ ಹೋಗುವುದು? ಏನಾಗಿದೆ ಮಠದಲ್ಲಿ? ಅದಾರು ಸ್ವಾಮಿ 'ಅಯ್ಯೋ! ಅಯ್ಯೋ!' ಎಂದು ಕೂಗಿದುದು? ಬಹಳ ಚಿಕ್ಕವಳು ಪಾಪ ಆ ಹುಡುಗಿ! ನಿಮ್ಮ ಸ್ವಾಮಿರು ದೊಡ್ಡ ದೈತ್ಯ! ಏನಾಯಿತೋ ಪಾಪ!" ಎಂದು ಡ್ರ್ಯಾವರನು ಎಲ್ಲವನ್ನೂ ತಿಳಿದವನಂತೆ ಹೇಳಿದಾಗ ನರಸಿಂಹನು ವಿಸ್ಮಿತನಾದ. ಮೋಟರ್ ನಿಲ್ಲುವುದೊಂದೇ ತಡ, ಸ್ಟೀಯರಿಂಗಿಗೆ ತಲೆಯಿಟ್ಟು ಗೊರಕೆ ಹೊಡೆಯುವ ಈ ಟೊಣಪ್ಪನಿಗೆ ಇದೆಲ್ಲಾ ಹೇಗೆ ಗೊತ್ತಾಯಿತೆಂದು ಆಲೋಚಿಸ ತೊಡಗಿದ. ಆ ಮೇಲೆ ದರ್ಪದ ನಟನೆಯಿಂದ, "ಏನೆಲ್ಲಾ ಹೇಳುತ್ತಿರುವೆಯೋ ಮನಬಂದಂತೆ? ಯಾವ ಹುಡುಗಿ? ಸ್ವಾಮಿರಿಗೆ ಜ್ವರ ಬರತೊಡಗಿ ದಿವಸ ಹತ್ತಾಯಿತು. ಈಗ ಜ್ವರ ತಲೆಗೇರಿ ಬುದ್ಧಿಯೇ ಅವರ

ಸ್ವಾಧೀನವಿಲ್ಲ. ಕೂಗಿದುದು ಅವರು ಜ್ವರದ ಬಾಧೆ ತಡಕೊಳ್ಳಲಾರದೆ. ಆದಕ್ಕಾಗಿಯೇ ನಾನೀಗ ಡಾಕ್ಟರರನ್ನು ಕರತರಹೊರಟುದು ಈ ರಾತ್ರಿಗೆ" ಎಂದ ನರಸಿಂಹ. "ಹೌದೌದು ಜ್ವರ! ನನಗೆಲ್ಲಾ ಗೊತ್ತಿಲ್ಲೆಂದು ತಿಳಿದಿರಾ? ಸಾಕು ಸಾಕು ಸುಮ್ಮಗಿರಿ" ಎಂದು ಡ್ರ್ಯಾವರನು ನರಸಿಂಹನ ಕಡೆಗೊಮ್ಮೆ ಕಳ್ಳನೋಟ ಬೀರಿ ಮೋಟರ್ ಸ್ಟಾರ್ಟ್‌ಮಾಡಿ ಓಡಿಸಿದ. ನರಸಿಂಹನು ಡಾಕ್ಟರರನ್ನು ಕರತಂದೊಡನೆಯೇ ಆ ಡ್ರ್ಯಾವರನನ್ನು ಕಳುಹಿಸಿಬಿಡುವ ನಿರ್ಧಾರಮಾಡಿದ. ಟೇಕ್ಸಿ ಡ್ರ್ಯಾವರನೊಬ್ಬನು ಸುದ್ದಿಯ ದೂತನಾದನೆಂದರೆ ಮತ್ತೆ ಕೇಳಬೇಕೇ? ಇಲ್ಲವಾದರೆ ಅಷ್ಟು ಬೇಗ ಸುದ್ದಿಯು ತನ್ನ ಕೆಲಸ ಮಾಡುತ್ತಿದ್ದಿಲ್ಲ. ಯಾಕಂದರೆ ಡಾಕ್ಟರರಿಂದ ಎಂದೂ ಗುಟ್ಟು ಹೊರಬೀಳುವ ಹಾಗಿಲ್ಲ. ಅಲ್ಲದೆ ಸ್ವಾಮಿಯರು ೨೦೦ ರೂಪಾಯಿ ನಗದಿ ಕೊಟ್ಟು, ಗುಟ್ಟು ರಟ್ಟುಮಾಡದೆ ಮಾನವನ್ನುಳಿಸಿಕೊಡಬೇಕೆಂದು ಕೇಳಿಕೊಂಡಿದ್ದರು. ಮನೆ ಯಜ್ಜಿಯು ತನ್ನ ಮಕ್ಕಳು ಮೊಮ್ಮಕ್ಕಳಿಗೆ ಕಠಿಣ ಕಾಯಿಲೆಯಾದಾಗ ದಿಗಿಲುಗೊಂಡು ಬೇರೆ ಬೇರೆ ಕಡೆಯ ದೈವ ದೇವರುಗಳಿಗೆ, ತೀರಿಸಲು ಸಾಧ್ಯವೇ ಇಲ್ಲದ ಹರಿಕೆಗಳನ್ನು ಹೇಳಿಕೊಳ್ಳುವಂತೆ ಶಿವಾನಂದರು ಶೋಕಿನ ಮನೆ, ಅಮೂಲ್ಯ ಚಿನ್ನಾಭರಣ, ಬೇಕಷ್ಟು ಆಸ್ತಿಪಾಸ್ತಿಯ ಆಶೆ ಬೀರಿ ನಾಗಿ ಯನ್ನು ಹೇಗೂ ಸಮಾಧಾನಪಡಿಸಿದರು. ಇದುಹೊರತು ಆಗಲೇ ರೂಪಾಯಿ ನೂರು ಕೊಟ್ಟರು. ಲಲಿತೆಗೆ ಯಾವ ಅಪಾಯವೂ ಆಗಿಲ್ಲೆಂದು ಡಾಕ್ಟರರಿಂದ ಭರವಸೆ ಹೇಳಿಸಿದರು. ಆ ಮೇಲೆ ಬೆಳಗಾಗಲು ಎರಡು ಮೂರು ಘಂಟೆ ಯಿರುವಾಗಲೇ ಅರೆಮರವೆಯಲ್ಲಿದ್ದ ಲಲಿತೆಯನ್ನು ನಾಗಿಯೊಂದಿಗೆ ಅವಳ ಮನೆಗೆ ನರಸಿಂಹನು ಮುಟ್ಟಿಸಿದ್ದನು. ಅದಕ್ಕಾಗಿ ಅವನು ಮೊದಲಿನದನ್ನು ಬಿಟ್ಟು ಬೇರೆಯೇ ಒಂದು ಟೇಕ್ಸಿತರಿಸಿದ್ದನು. ಎಲ್ಲವೂ ಅತಿ ರಹಸ್ಯವಾಗಿಯೇ ನಡೆದಿತ್ತು. ಹೊರಗಣ ಜನರಿಗೇನೂ ತಿಳಿದಿಲ್ಲೆಂಬ ಸಮಾಧಾನದಿಂದ ಶಿವಾನಂದರೂ ನರಸಿಂಹನೂ ಆಗಾಗ ಹೃದಯದಲ್ಲೇಳುತ್ತಿದ್ದ ತಳಮಳವನ್ನು ಮೂಲೆಗೊತ್ತುತ್ತಿದ್ದರು. ಆದರೆ ಪಾತಕವು ಒಳಗೊಳಗಿಂದಲೇ ಊರೆಲ್ಲಾ ತುಂಬಿ ನಾನಾ ಉದ್ಗಾರಗಳನ್ನೆಬ್ಬಿಸುತ್ತಿತ್ತು.

ಶಿವಪುರದ ಹೆಮ್ಮಕ್ಕಳ ಟ್ರೈನಿಂಗ್ ಸ್ಕೂಲಿನ ಉಪಾಧ್ಯಾಯಿನಿಯರ ಲ್ಲೊಬ್ಬರೂ ವಿದ್ಯಾರ್ಥಿನಿಯರಿಗೆ ಪ್ರಿಯರೂ ಅತ್ಯಂತ ಪ್ರಗತಿಪರ ಮನೋವೃತ್ತಿ

ಯುವರೂ ಆದ ಶ್ರೀಮತಿ ಸುಮಿತ್ರಾಬಾಯಿಯವರು ಮರುದಿನ ಬೆಳಿಗ್ಗೆ ಶಾಲೆಗೆ ಹೋದಾಗ, ಲಲಿತೆಯ ಸಂಗಾತಿಯರು, "ಇವತ್ತು ಲಲಿತೆ ಶಾಲೆಗೆ ಬರುವುದಿಲ್ಲ ಸುಮಿತ್ರಮ್ಮಾ, ಅವಳಿಗೆ ಪಾಪ ಜ್ವರಬರುತ್ತದೆ. ಇನ್ನವಳು ಶಾಲೆಗೇನೇ ಬರುವುದಿಲ್ಲವಂತೆ; ಜ್ವರ ಗುಣವಾದ ಮೇಲೆ ಬರುತ್ತಾಳಂತೆ" ಎಂದೆಲ್ಲಾ ತಮಗೆ ತಿಳಿದಿರುವುದನ್ನು ಬಹಳ ಉಮೇದಿನಿಂದ ಸುಮಿತ್ರಾ ಬಾಯಿಯವರಿಗೆ ತಿಳಿಸಿದರು. ಲಲಿತೆಯ ಮೇಲೆ ಅವರಿಗೆಷ್ಟು ಪ್ರೀತಿ ಇರುವುದೆಂಬುದನ್ನವರು ಅರಿತಿದ್ದರು. ಆದುದರಿಂದ ಅವಳ ವಾರ್ತೆಯನ್ನವರಿಗೆ ತಿಳಿಸಿದರೆ ತಮ್ಮ ಮೇಲೆ ಅವರು ಪ್ರಸನ್ನರಾದಾರೆಂದೇ ಹುಡುಗಿಯರು ಅಷ್ಟೊಂದು ಉಮೇದುಗೊಂಡುದು. ಆದರೆ ಅಂದಿನ ಸುಮಿತ್ರಾಬಾಯಿಯೇ ಬೇರೆಯಾಗಿ ಹೋಗಿದ್ದರು. ಎಂದಿನಂತಹ ವಿನೋದ, ಉಲ್ಲಾಸ ಮತ್ತು ಮಾತು ನಗೆಯ ಚೆಲ್ಲಾಟವೆಲ್ಲಾ ಕುಂದಿ ಮುಖವು ಕಂದಿಹೋಗಿತ್ತು. ಅವರ ಮೃದು ಹೃದಯವನ್ನು ಅದಾವುದೋ ತೀವ್ರ ಚಿಂತೆಯ ಬೇಗೆಯು ಸುಡುತ್ತಿತ್ತು. ಹುಡುಗಿಯರೆಲ್ಲಾ ಇದನ್ನು ಕಂಡು ವಿಸ್ಮಿತರಾಗಿ ಸುಮ್ಮನಾದರು. ಅಂದು ಸುಮಿತ್ರಾಬಾಯಿಯವರು ಕ್ಲಾಸಿನಲ್ಲಿ ಹುಡುಗಿಯರನ್ನು ಓದಹೇಳಿ ತಾನು ದೀರ್ಘಕಾಲ ಕುರ್ಚಿಯಲ್ಲೇ ಕೂತು ಗಾಢ ಚಿಂತಾಮಗ್ನರಾಗಿದ್ದರು. ಸ್ವಲ್ಪವೇನಾದರೂ ಪಾಠಮಾಡುವಾಗಲೂ ವಿಮನಸ್ಕರೇ ಆಗಿದ್ದರು. ಅವರು ಶಾಲೆಗೆ ಬಂದೊಡನೆಯೇ ಅವರ ಸಹೋದ್ಯೋಗಿನಿ ಸುಶೀಲೆಯು "ಸುಮಿತ್ರಮ್ಮಾ, ನಿಮ್ಮ ಲಲಿತೆಯ ಗತಿಯೇನಾಯಿತೆಂದು ಗೊತ್ತೇ? ಊರೆಲ್ಲಾ ಹಬ್ಬಿದೆ ಅವಳ ಸುದ್ದಿ" ಎಂದು ಗುಟ್ಟಿನಲ್ಲಿ ಎಲ್ಲಾ ಸಂಗತಿಗಳನ್ನವರಿಗೆ ತಿಳಿಸಿದಳು. ಅವರದನ್ನು ಕೇಳಿ ಸ್ತಂಭಿತರಾದರು. ಒಂದು ಶಬ್ದ ಕೂಡಾ ಮಾತಾಡದಾದರು. ಅವರ ಕಂಗಳಲ್ಲಿ ನೀರು ತುಂಬಿಬಂತು. "ಸುಶೀಲ, ನಾನು ಹೊರಗೆ ಹೋಗಿಬರುತ್ತೇನೆ"ಂದು ಹೇಳಿ 'ಟೀಚರ್ಸ್ ರೂಮಿ'ನಿಂದ ಹೊರನಡೆದರು. 'ವರಾಂಡ'ದ ಒಂದು ಮೂಲೆಗೆ ಹೋಗಿ ಉಕ್ಕಿ ಬರುವ ದುಃಖ ವನ್ನು ಸಹಿಸಲಾರದೆ ಬಿಕ್ಕಿಬಿಕ್ಕಿ ಅತ್ತರು. ಅಷ್ಟು ಕೋಮಲವಾಗಿತ್ತು ಆವರ ಹೃದಯ. ಆಗ ಶಾಲಾರಂಭವಾಗುವ ಘಂಟೆಯಾಯಿತು. ಒಡನೆಯೇ ಅವರು ದುಃಖವನ್ನು ಒತ್ತಿಕೊಂಡು ಕಣ್ಣೀರನ್ನೊರಸಿ 'ಕ್ಲಾಸ್‌ರೂಮಿ'ಗೆ ಹೋದರು. ಆಗ ಹುಡುಗಿಯರು ಮೇಲಿನ ಮಾತುಗಳನ್ನೆಲ್ಲಾ ಅವರೊಡನೆ ಹೇಳಿದರು.

"ಲಲಿತೆಗೆ ಈ ಗತಿಯಾಯಿತೇ? ಅಹ, ಎಷ್ಟು ಒಳ್ಳೆಯ ಹುಡುಗಿ! ಎಂತಹ ಗುಣನಡತೆಯುಳ್ಳವಳು! ಅದೆಷ್ಟು ಚುರುಕುಬುದ್ಧಿಯುಳ್ಳವಳು! ಮೇಲಾಗಿ ಎಷ್ಟೊಂದು ರೂಪವತಿ! ಅಯ್ಯೋ ದೇವರೇ! ಎಂತಹ ರಾಕ್ಷಸರಪ್ಪ ಪುರುಷ ಜಾತಿ! ಆದರೂ ಶಿವಾನಂದರು ಸರ್ವಬಿಟ್ಟ ಸನ್ಯಾಸಿ! ಸನ್ಮಾನ್ಯ ಯೋಗಿ!! ಸಮಾಜದ ಧರ್ಮಾಧಿಕಾರಿ!!! ಅವರೇ ಇಂತಹ ನರಪಿಶಾಚಿ!!!! ಅಹಹ, ಏನೆನ್ನಬೇಕು ಈ ವಿಪರ್ಯಾಸಕ್ಕೆ! ಇಂತಹ ನರಾಧಮನನ್ನೂ ವಿಚಾರ ಹೀನ ಸಮಾಜವು ಧರ್ಮಾಧಿಕಾರದ ಪೀಠಕ್ಕೇರಿಸಿ ಪೂಜಿಸುವುದಲ್ಲವೇ? ಅವನನ್ನೂ ಜನರು ಧರ್ಮಗುರುವಾಗಿ ಪರಿಗಣಿಸಿ ಪರಾಕೆ, ಬುದ್ಧಿಯೆಂದು ತಲೆಯ ಮೇಲೆ ಹೊತ್ತು ತಿರುಗುವರಲ್ಲವೇ? ಕಾಣಿಕೆ, ಉಡುಗೊರೆಗಳಿಂದ ಸತ್ಕರಿಸಿ ಕೊಬ್ಬಿಸುವುದಲ್ಲವೇ? ಛೆ! ಛೆ!! ಇಂತಹ ತುಚ್ಛ ನೀಚ ಧರ್ಮಾಧಿಕಾರಿಗೂ, ವಿವೇಕಹೀನ ಕರ್ತವ್ಯಭ್ರಷ್ಟ ಬಡ ಸಮಾಜಕ್ಕೂ ಶತಶಃ ಧಿಕ್ಕಾರವಿರಲಿ! ಅಯ್ಯೋ ಲಲಿತೆ, ನಿನ್ನ ಗತಿ ಹೀಗಾಯಿತೇ? ನಿನ್ನ ತಾಯಿಯೇ ನಿನ್ನನ್ನು ಜೀವನ್ಮೃತಳನ್ನಾಗಿ ಮಾಡಲು ನೆರವಾದಳಲ್ಲವೇ? ಅವಳೇನು ಮಾಡಿಯಾಳು ಮತ್ತೆ! ಅವಳ ಮಗಳು ಅವಳಂತೆಯೇ ಆಗದೆ ಬೇರೆ ರೀತಿಯಾಗಲು ಕ್ರೂರ ಸಮಾಜವು ಬಿಡುವುದೇ? ವೇಶ್ಯೆಯ ಮಗಳು ಎಷ್ಟೊಂದು ಸುಶೀಲೆಯಾದರೂ ವೇಶ್ಯೆಯೇ ಅಲ್ಲವೇ? ಸಮಾಜದ ರೀತಿಯೇ ಹಾಗಲ್ಲವೇ? ರೂಢಿಯ ಗೂಡೊಳಗಣ ಗೊಂಬೆಯಾದ ಅದಕ್ಕೆ ಲಲಿತೆಯ ಹೃದಯದ ಪರಿಯೇನು ಗೊತ್ತು! ಅಹ, ಎಳೆ ಬಾಲೆಯ ಮೇಲೆ ಎಂತಹ ಪೈಶಾಚಿಕ ಅತ್ಯಾಚಾರ! ಮನಸ್ಸಾದರೂ ಹೇಗೆ ಬಂತಪ್ಪಾ ಆ ಪಿಶಾಚಿಗೆ! ನ್ಯಾಯ, ನೀತಿ, ಧರ್ಮ, ದೇವರೆಲ್ಲಿ? ಅವೆಲ್ಲವೂ ಅಂಧರೂಢಿಯ, ಪುರುಷಾಧಿಕಾರದ ಧನ ದೌಲತ್ತಿನ ಕೈಗೊಂಬೆಗಳು! ಹಾಳು ಸಮಾಜ, ಹಾಳು ರೀತಿ ನೀತಿ, ಹಾಳು ಧರ್ಮ ದೇವರು ಎಲ್ಲವೂ ಹಾಳು. ಇವೆಲ್ಲಾ ಹಾಳಾಗಿಹೋಗದೆ ಸ್ತ್ರೀಯರಿಗೆಲ್ಲಿ ಒಳ್ಳೇ ಬಾಳು!" ಎಂದೆಲ್ಲಾ ಸುಮಿತ್ರಾಬಾಯಿಯವರಲ್ಲಿ ತರಂಗವಾಗಿ ಭಾವನೆಗಳೆದ್ದು ಹೃದಯದಲ್ಲಿ ಪ್ರಚಂಡ ಕೋಲಾಹಲವನ್ನೆಬ್ಬಿಸಿದವು. ಸ್ತ್ರೀ ಸಮಾಜದ ದುರವಸ್ಥೆಗಾಗಿ ಅನುದಿನವೂ ಪರಿತಪಿಸುತ್ತಿದ್ದ ಸ್ವತಂತ್ರ ವಿಚಾರದ ಮಹಿಳೆಯಿದ್ದರವರು. ಕುರ್ಚಿಯಲ್ಲಿ ಕುಳಿತು ಚಿಂತಾಮಗ್ನರಾಗಿದ್ದ ಅವರಿಗೆ ತಾನೊಂದು ಕ್ಲಾಸು ನಡಿಸುತ್ತಿದ್ದೇನೆಂಬ ಗೋಷ್ಟಿಯೇ ಇರಲಿಲ್ಲ. ಎಳೆ

ಬಾಲೆ—ಲಲಿತೆಯ ಚಿತ್ರವೇ ಅವರ ಮನೋದೃಷ್ಟಿಯ ಮುಂದೆ ಕಣ್ಣೀರಿಡುತ್ತಾ ನಿಂತಿದ್ದಿತು. ಅವರೆಷ್ಟು ಪ್ರಯತ್ನಿಸಿದರೂ ಮತ್ತೂ ಅದೇ ಚಿತ್ರ ಕಣ್ಣ ಮುಂದೆ ಬಂದು ನಿಲ್ಲುವುದು. ಅವಳನ್ನೊಮ್ಮೆ ನೋಡಿಯೇ ಬರಬೇಕೆಂದು ತೋರಿತವರಿಗೆ. ಅಂತೆಯೇ ಅವರು ನಿರ್ಧರಿಸಿದರು.

ಲಲಿತೆಗೆ ಸರಿ ಜ್ಞಾನ ಬಂದಾಗ ಮೊದಲು ಅವಳೆತ್ತಿದ ಉದ್ಗಾರವೆಂದರೆ, "ಅದೋ ಸುಮಿತ್ರಾಬಾಯಿಯವರು! ನಾನೇನು ಮಾಡಲಮ್ಮಾ!! ನಾನೇನು ಮಾಡಲಿ!!!" ಎಂಬುದು. ನಾಗಿಯು ಯಾವ ರೀತಿಯಲ್ಲಿ ಸಂತೈಸಿದರೂ ಲಲಿತೆಯು ಭ್ರಾಂತಳಂತೆ ಮೇಲಿನ ಉದ್ಗಾರವನ್ನು ಆಗಾಗ ಎತ್ತುತ್ತಲೇ ಇದ್ದಳು. ಆ ಉದ್ಗಾರವೆತ್ತಿದಾಗಲೆಲ್ಲಾ ಅವಳ ಕಣ್ಣುಗಳಿಂದ ಒಂದೇ ರೀತಿ ನೀರಿಳಿದುಬರುತ್ತಿತ್ತು. ಆಗ, "ಅಯ್ಯೋ! ನಾನೇಕಿವಳನ್ನು ಶಾಲೆಗೆ ಕಳುಹಿಸಿದೆನಪ್ಪಾ! ಎಲ್ಲಿಂದೊಬ್ಬರು ಸುಮಿತ್ರಾಬಾಯಿಯವರು ಇವಳಿಗೆ ಸಂಘಟನೆಯಾದರೋ!" ಎಂದು ನಾಗಿಯು ಹಂಬಲಿಸುತ್ತಿದ್ದಳು. ಶಿವಪುರ ಮಠದಲ್ಲಿ ನಡೆದ ವಿದ್ಯಮಾನದ ಮರುದಿನ ಸಂಜೆ ಲಲಿತೆಯು ಹಲವು ಬಾರಿ ಮೇಲಿನ ಉದ್ಗಾರವೆತ್ತಿದ್ದಳು. ನಾಗಿಯು ಅದಕ್ಕೇನುಮಾಡುವುದೆಂದು ತೋರದೆ ಕಂಗೆಟ್ಟು ಅವಳ ಕಾಲಬುಡದಲ್ಲಿ ಕುಳಿತ್ತಿದ್ದಳು. ಆಗ ಸುಮಿತ್ರಾಬಾಯಿಯವರು ಸಾವಿನ ಮನೆಗೆ ಪ್ರವೇಶಿಸುವಂತೆ ಬಹಳ ಶಂಕಿಸಿ ಶಂಕಿಸಿ ನಾಗಿಯ ಮನೆಯ ಒಳಹೊಕ್ಕರು. ರಸ್ತೆಬದಿಯ ಬಾಗಿಲಿಂದ ಒಳಗೆ ಬಂದೊಡನೆಯೇ ತುಸುಹೊತ್ತು ನಿಂತು ಯೋಚಿಸಿದರು. ಆಗ ಒಳಗಿಂದ, "ಅದೋ ಸುಮಿತ್ರಾಬಾಯಿಯವರು! ನಾನೇನು ಮಾಡಲಮ್ಮಾ! ನಾನೇನು ಮಾಡಲಿ!" ಎಂದು ಲಲಿತೆಯು ಗೋಳಿಡುವುದು ಕೇಳಿಬಂತು. ಅವರು ಚಕಿತರಾಗಿ ಗೊಂಬೆಯಂತೆ ಕ್ಷಣಕಾಲನಿಂತು ಉತ್ತರಕ್ಷಣದಲ್ಲೇ ಒಳಗೆ ಲಲಿತೆಯ ಕೋಣೆಗೆ ಹೋಗಿ "ಲಲಿತ! ಲಲಿತ!" ಎಂದು ಕರೆದು ಮುಂದೇನು ಹೇಳುವುದೆಂದು ತೋಚದೆಯೇ ಸಂತಾಪಭರದಿಂದ ಕುತ್ತಿಗೆಯು ಬಿಗಿದು ಬಂದು ಸುಮ್ಮನಾದರು. ಲಲಿತೆಯು ದೃಷ್ಟಿ ತಿರುಗಿಸಿ ಸುಮಿತ್ರಾಬಾಯಿಯವರನ್ನು ಕಣ್ಣು ಕಣ್ಣು ನೋಡಿದಳು. ಎವೆಯಿಕ್ಕದೆ ನೋಡಿದಳು. ದಣಿವರಿಯದೆ ನೋಡಿದಳು. ಥರಥರನೆ ಕಣ್ಣೀರು ಸುರಿಸಿದಳು. ತುಸು ಸಮಯದ ಮೇಲೆ ಮಾತಾಡಲೆತ್ನಿಸಿದಳು. ಆಗಲಿಲ್ಲ. ಬಹಳವಾಗಿ

ಪ್ರಯತ್ನಿಸಿದಳು. ನಿಷ್ಫಲ. ಆ ಮೇಲೆ ಕೈಸನ್ನೆಯಿಂದ ಸುಮಿತ್ರಾಬಾಯಿಯವರನ್ನು ಸಮೀಪ ಬರಹೇಳಿ ಅವರ ಅಂಗೈಗಳೆರಡನ್ನೂ ಹಿಡಿದು ಚುಂಬಿಸಿದಳು. ತನ್ನ ಕೈಗಳೆರಡನ್ನೂ ಪ್ರಯಾಸದಿಂದ ಒಟ್ಟುಮಾಡಿ ವಂದಿಸಿದಳು. ಸುಮಿತ್ರಾಬಾಯಿಯವರು ಎಷ್ಟೊಂದು ದೃಢನಿರ್ಧಾರದಿಂದ ದುಃಖವನ್ನು ಕಟ್ಟಿಕೊಂಡರೂ ಪ್ರಯೋಜನವಾಗಲಿಲ್ಲ. ಅದು ಒಮ್ಮೆಯೇ ಕಟ್ಟೊಡೆದು ಹೊರ ಹರಿಯಿತು. ಅವರು, ದೊಪ್ಪನೆ ಲಲಿತೆಯ ಬಳಿ ಕುಳಿತು ಅವಳ ಕೈಗಳೆರಡನ್ನೂ ಹಿಡಿದು ಅತ್ತುಬಿಟ್ಟರು. ಎಷ್ಟೊಂದು ಪ್ರಯತ್ನಿಸಿದರೂ ಮತ್ತೆ ಶಬ್ದಗಳೇ ಹೊರಡವು ಅವರ ಬಾಯಿಯಿಂದ. ಇಬ್ಬರೂ ಒಬ್ಬರೊಬ್ಬರನ್ನು ನೋಡುತ್ತಾ ಕೆಲಸಮಯ ಕಳೆದರು. ಧಾರೆಕಟ್ಟಿ ಕಣ್ಣೀರು ಸುರಿಸಿದರು. ಆ ಮೌನವಾದರೂ ಅದೆಷ್ಟು ಅರ್ಥಪೂರ್ಣ! ಎಷ್ಟೊಂದು ಹೃದ್ರಾವಕ! ಸುಮಿತ್ರಬಾಯಿಯವರೆಂದರೆ ಮುನಿದುಬೀಳುತ್ತಿದ್ದ ನಾಗಿಯ ಮೇಲೂ ಅದು ಪರಿಣಾಮವನ್ನುಂಟುಮಾಡಿತು. ಎಂತಹ ವಜ್ರ ಹೃದಯವನ್ನೂ ಕರಗಿಸಿಬಿಡುವಷ್ಟು ಪ್ರಭಾವದ ಮೌನವದು. ನಾಗಿಯ ಮಾತೇನು ಮತ್ತೆ? ಅವಳೂ ಕಣ್ಣೀರಿಳಿಸಿ ದುಃಖಿಸುತ್ತಾ ಕೂತಳು. ಲಲಿತೆಯು ಏನೋ ಹೇಳಲೆತ್ನಿಸಿ ಗಂಟಲೊತ್ತಿಹಿಡಿದಂತಾಗಿ ಚಡಪಡಿಸಿದಳು. ಆಗ ಸುಮಿತ್ರಾಬಾಯಿಯವರು, "ಅಯ್ಯೋ ಲಲಿತ! ಬೇಡ ಮಗು ಬೇಡ, ಮಾತಾಡಲೆತ್ನಿಸಬೇಡ!" ಎಂದು ನೈದಡವಿ ಲಲಿತೆಯನ್ನು ಸಮಾಧಾನ ಪಡಿಸಲೆತ್ನಿಸಿದರು. ಅವಳು ಜೀವಸಂಕಟವಾಗಿ ಕಣ್ಣು ಮುಚ್ಚಿದಳು.

"ಅಯ್ಯೋ ಮಗು! ಏನಾಯಿತು!! ಏನಾಯಿತು!!!" ಎಂದು ನಾಗಿಯು ತಲ್ಲಣಗೊಂಡು ಓಡಿಬಂದು ಲಲಿತೆಯ ಗಲ್ಲಹಿಡಿದೆತ್ತಿದಳು. "ಏನಿಲ್ಲ, ಸ್ವಲ್ಪ ಹಾಲುತನ್ನಿ, ಬೇಗತನ್ನಿ!" ಎಂದರು ಸುಮಿತ್ರಾಬಾಯಿಯವರು ಉದ್ವೇಗ ಗೊಂಡು. ನಾಗಿಯು ಅಡಿಗೆಮನೆಗೋಡಿ ಒಂದು ಕಂಚಿನ ಲೋಟೆಯಲ್ಲಿ ಹಾಲು ಹಿಡಕೊಂಡು ಓಡಿಬಂದಳು. ಅವಳ ಕೈಕಾಲುಗಳು ಕಂಪಿಸುತ್ತಿದ್ದವು. ಹೃದಯವು ದಡಬಡಿಸುತ್ತಿತ್ತು. ಸುಮಿತ್ರಾಬಾಯಿಯವರು "ಲಲಿತ, ಲಲಿತ! ಇದೋ ಸ್ವಲ್ಪ ಹಾಲುಕುಡಿ ಮಗು" ಎಂದರು. ಲಲಿತೆಯು ಮೆಲ್ಲಗೆ ಬಾಯಿತೆರೆದು ಹಾಲು ಕುಡಿದು ತುಸು ಸಮಯದಲ್ಲಿ ಕಣ್ಣು ತೆರೆದಳು. ಮತ್ತೂ ಕಣ್ಣೀರು ಹರಿಯತೊಡಗಿತು. ಆಗ ನಾಗಿಯು ತಳಮಳಗೊಂಡು,

"ಅಮ್ಮಾ, ನೀವಿನ್ನು ಹೋಗಿ. ಡಾಕ್ಟರರು ಬರುವ ಹೊತ್ತಾಯಿತು. ಯಾರನ್ನೂ ಲಲಿತೆಯ ಹತ್ತಿರ ಬರಬಿಡಕೂಡದೆಂದವರು ಹೇಳಿರುವರು. ಮತ್ತೆ ಸಿಟ್ಟುಗೊಂಡಾರು" ಎಂದಳು. ಸುಮಿತ್ರಾಬಾಯಿಯವರು ತುಸು ಕಠಿಣ ದೃಷ್ಟಿಯನ್ನೊಮ್ಮೆ ನಾಗಿಯ ಕಡೆಗೆ ಬೀರಿ, "ಆಯ್ತಾಯ್ತು ಹೋಗುತ್ತೇನೆ. ಇನ್ನೊಮ್ಮೆ ಬರುತ್ತೇನೆ" ಎಂದರು. "ಯಾಕೆ ಇನ್ನೊಮ್ಮೆ ಬರುವುದಮ್ಮಾ? ಲಲಿತೆಯು ಇನ್ನು ಶಾಲೆಗೆ ಬರುವ ಹಾಗಿಲ್ಲ. ನಮ್ಮ ಮನೆಗೆಲ್ಲಾ ನೀವು ಯಾಕೆ ಬರುವುದು? ಇನ್ನು ಬರುವುದು ಬೇಡಮ್ಮಾ" ಎಂದು ಬಿಟ್ಟಳು ನಿರ್ದಾಕ್ಷಿಣ್ಯವಾಗಿ. ಸುಮಿತ್ರಾಬಾಯಿಯವರನ್ನು ಕಂಡರೆ ಲಲಿತೆಗೆ ಅಸಹನೀಯ ದುಃಖವಾಗುವುದೆಂಬ, ಮತ್ತು ಲಲಿತೆಯನ್ನವರು ಪುನಃ ಎಲ್ಲಿಯಾದರೂ ತಮ್ಮ ವಶಮಾಡಿಕೊಂಡುಬಿಟ್ಟರೆ ಮತ್ತೇನು ಆಪತ್ತುಂಟಾಗುವುದೋ ಎಂಬ ಭೀತಿ ನಾಗಿಗೆ. ಸುಮಿತ್ರಾಬಾಯಿಯವರಿಗೆ ನಾಗಿಯ ಅಭಿಪ್ರಾಯವೆಲ್ಲಾ ತಿಳಿದುಹೋಯಿತು. ಅವರು ಲಲಿತೆಯನ್ನು ನೋಡಿ ದೀರ್ಘ ನಿಶ್ವಾಸಬಿಟ್ಟರು. "ಲಲಿತ ನಾನು ಹೋಗುತ್ತೇನೆ. ಸಂತಾಪಪಡಬೇಡ" ಎಂದು ಹೇಳುವಾಗ ಒಮ್ಮೆಯೇ ದುಃಖವು ಏರಿ ಬರಲು ಅವರು ಸೆರಗಿನ ತುದಿಯನ್ನು ಬಾಯಿಗೊತ್ತಿಟ್ಟು ಕಚ್ಚಿಹಿಡಿದು ಕಣ್ಣೀರಿಳಿಸುತ್ತಾ ಹೊರನಡೆದುಬಿಟ್ಟರು. ಆದರೆ ಲಲಿತೆಯ ಕೋಣೆಬಿಟ್ಟು ಚಾವಡಿಗೆ ಹೋದೊಡನೆಯೇ ಅವರಿಗೆ ಕಾಲೇ ಬಾರದು. ಎಷ್ಟು ಪ್ರಯತ್ನಿಸಿದರೂ ಹೆಜ್ಜೆಯಿಡಲು ಸಾಧ್ಯವಾಗದೆ ಹೋಯಿತು. ಅವರು ತುಸು ಹೊತ್ತು ನಿಂತಲ್ಲೇ ನಿಂತರು. ಆ ಮೇಲೆ ಅದೇನೋ ಬೇರೆ ಯೋಚನೆ ಮಾಡಿ ದೃಢ ನಿರ್ಧಾರ ಮಾಡಿದರು. ಮೆಲ್ಲಗೆ ನಾಗಿಯ ಮನೆಯಿಂದ ಹೊರ ನಡೆದರು. ಅವರು ಮನೆಗೆ ಹೋಗುವಾಗ ಅವರ ಮನಸ್ಸಿನಲ್ಲುಂಟಾದ ಭಾವನೆಗಳನ್ನೆಲ್ಲಾ ನಾವಿಲ್ಲಿ ವಿವರಿಸುವ ಅವಶ್ಯವಿಲ್ಲ. ವಾಚಕರೇ ಅದನ್ನು ಊಹಿಸಿಕೊಳ್ಳಬಹುದು.

# ಅಧ್ಯಾಯ ೫

## “ಶರಾಬು! ಶರಾಬು!! ಅಮ್ಮಾ, ನನಗೆ ಶರಾಬು ಕುಡಿಸಿದೆಯಾ?”

ಎಂತಹ ಸ್ಮರಣೆಯಾದರೂ ಕಾಲದ ಉರುಳಾಟದಲ್ಲಿ ಮರೆಮಾಜಿಯೇ ಬಿಡುವುದು. ಎಷ್ಟೊಂದು ಭಿನ್ನಭಿನ್ನವಾಗಿ ಒಡೆದುಹೋದ ಹೃದಯವನ್ನಾದರೂ ಕಾಲ ವೈದ್ಯನು ಸರಿಮಾಡಿ ಬಿಡುವನು. ಚಮತ್ಕಾರವಾಗಿ ಒರಸಿ ಮರೆಸಿಬಿಡುವ ಕಾಲನ ಜಾದು ವಿದ್ಯೆಯಿಂದಲೇ ಜೀವನ ವ್ಯಾಪಾರವು ಸಾಧ್ಯವಾಗಿದೆ. ಲೋಕ ವ್ಯವಹಾರದ ಸಂಚಾಲಕ ಶಕ್ತಿಯೇ ಅದೆನ್ನಬಹುದು. ಭವಿಷ್ಯದ ಗರ್ಭದಲ್ಲಿ ಭೀಕರವಾಗಿ ಅಸಹನೀಯವಾಗಿ ತಲ್ಲಣಗೊಳಿಸುವ ಪರಿಸ್ಥಿತಿಯು ವರ್ತಮಾನದ ಮಡಿಲಿಗೆ ಬರುವಾಗ ತುಸು ಸಮಯದ ವೇದನೆಯನ್ನಷ್ಟೇ ಉಂಟುಮಾಡುವುದು. ಆಮೇಲೆ ಕೆಲಸಮಯ ಸಂತಾಪದ ಬಿಸಿಯುಸಿರನ್ನೆಬ್ಬಿಸಿ ಭೂತಕಾಲದ ಸೆರಗಿನೊಳಗೆ ಮರೆಯಾಗುವುದು.

ಶಿವಪುರವನ್ನೊಮ್ಮೆ ಚಕಿತಗೊಳಿಸಿ ಎಲ್ಲೆಲ್ಲಿಯೂ ಕ್ಷೋಭೆಯನ್ನೆಬ್ಬಿಸಿದ್ದ ಆ ಭೀಕರ ಸುದ್ದಿಯ ನಲಿದಾಟವು ಇಂದೀಗ ಮುಗಿದು ಅಂಕದ ಪರದೆ ಎಳೆಯಲ್ಪಟ್ಟಿತ್ತು. ಶಿವಪುರಸ್ಥರು ಯಥಾಪ್ರಕಾರ ತಮ್ಮ ಅನುನಿತ್ಯದ ಜೀವನ ವ್ಯಾಪಾರದಲ್ಲಿ ನಿರತರಾಗಿದ್ದರು. ಶಿವಾನಂದರು ಕೆಲದಿನ, ಗಂಡ ಸತ್ತ ಸ್ತ್ರೀಯಂತೆ ಹೊರಗೆ ಮುಖ ಸಹ ತೋರಿಸದೆ ಒಳಗೊಳಗೇನೇ ಇದ್ದರೂ ದಿನ ಹೋದಂತೆಲ್ಲಾ ಹೆಚ್ಚೆಚ್ಚು ಧೈರ್ಯಗೊಂಡು ಮುಂದಡಿಯಿಟ್ಟು ಹಿಂದಿನ ಜೀವನದ ದಾರಿಗೇನೇ ಸೇರಲೆತ್ನಿಸುತ್ತಿದ್ದರು. ಸ್ವಲ್ಪ ಸಮಯ ಕಾಕಪೋಕರು ಕೆಲವರು ಅವರನ್ನು ಕಂಡೊಡನೆಯೇ ಏನೇನೋ ಹೇಳಿ ಕೂಗಿಡುತ್ತಿದ್ದರು. ಗೊಳ್ಳೆಂದು ನಗುತ್ತಿದ್ದರು. ಮಾನವಂತವೆನಿಸುವ ಸಮಾಜವು ಕಣ್ಮುಚ್ಚಿ ಸುಮ್ಮನಿರುತ್ತಿದ್ದಾಗ ಕಾಕಪೋಕ ಹೃದಯವು ಶಿವಾನಂದರನ್ನು ಬಹಿರಂಗವಾಗಿ ಅವಮಾನಿಸಲು ಎದೆಗೊಂಡಿತ್ತು. ಆದರೆ ಶಿವಾನಂದರು ಅದನ್ನು ಗಣ್ಯಮಾಡಬೇಕೇಕೆ? ಸಮಾಜದ ಆಧಾರ ಸ್ಥಂಭದಂತಿರುವ ಆಢ್ಯಗೃಹಸ್ಥರು ಅವರನ್ನು ಯಥಾಪ್ರಕಾರ ಮಾನಿಸುತ್ತಿರುವಾಗ ಈ ತಲೆಹೋಕರೇನು ಮಾಡಿದರೇನು?

ಆದರೆ ಲಲಿತೆಯ ಮೇಲೆ ಕಾಲನ ಕೈಚಳಕವು ಅಷ್ಟೊಂದು ಜಯಶೀಲವಾಗಿ ನಡೆಯಲಿಲ್ಲ. ಅವಳು ನೆಳಲಡಿಯ ಸೊರಗಿದ ಹೂಗಿಡದಂತಿದ್ದಳು. ರಕ್ತಛಾಯೆಯಿಲ್ಲದೆ ಮುಖವೆಲ್ಲಾ ಬಿಳುಪೇರಿ ಹೋಗಿತ್ತು. ಕಂಗಳು ನಿಸ್ತೇಜವಾಗಿದ್ದವು. ನಾಗಿಯು ಹತ್ತು ಮಾತಾಡಿದರೆ ಒಂದೇನಾದರೂ ಶಬ್ದವು ಅವಳ ತುಟಿಗಳೊಳಗಿಂದ ಬಹು ಪ್ರಯಾಸದಿಂದ ಹೊರಬೀಳುತ್ತಿತ್ತು. ಅವಳೆಲ್ಲಿಯಾದರೂ ದಿನಕ್ಕೊಂದು ಸಲ ಒಂದು ಮುಷ್ಟಿ ಊಟಮಾಡಿದರೆ ದೊಡ್ಡದು. ಜೀರ್ಣವೇ ಇದ್ದಿಲ್ಲ. ಇಡೀ ದಿನ ಮಲಗಿಕೊಂಡು ಕಣ್ಣೀರಿಡುವುದೊಂದೇ ಅವಳ ಕೆಲಸ. ಎದ್ದು ಕೂತರೂ ಕೂತಲ್ಲೇ ಕೂತು ಯೋಚಿಸುವುದೇ. ನಾಗಿಯು ಏನೇನೆಲ್ಲಾ ಮದ್ದು ಮಾಡಿಸಿದಳು. ಬಗೆ ಬಗೆಯ 'ಟೋನಿಕ್'ಗಳನ್ನೆಲ್ಲಾ ಒತ್ತಾಯದಿಂದ ಕುಡಿಸಿದಳು. ಹಲವು ಪರಿಯಿಂದ ಸಮಾಧಾನ ಪಡಿಸಲೆತ್ನಿಸಿದಳು. ಏನು ಮಾಡಿದರೂ ಲಲಿತೆಯು ಕ್ಷೀಣಳಾಗುತ್ತಾ ಬರುತ್ತಿದ್ದಳೇ ಹೊರತು ಸ್ವಲ್ಪವೂ ಪುಷ್ಟಿಯಾಗುತ್ತಿದ್ದಿಲ್ಲ. "ನಾನಿನ್ನು ಯಾವಾಗ ಶಾಲೆಗೆ ಹೋಗುವುದಮ್ಮಾ? ಸುಮಿತ್ರಾ ಬಾಯಿಯವರನ್ನೊಮ್ಮೆ ನೋಡಿಬರಲೇ?" ಎಂದು ಮಾತ್ರ ನಾಗಿಯೊಡನೆ ಒಮ್ಮೊಮ್ಮೆ ಪ್ರಶ್ನಿಸುತ್ತಿದ್ದಳು. ಮೊದಮೊದಲು ನಾಗಿಯು,"ನೀನು ಸಂಪೂರ್ಣ ಆರೋಗ್ಯವಂತಳಾಗು. ಆಮೇಲೆ ಶಾಲೆಗೂ ಹೋಗಬಹುದು, ಸುಮಿತ್ರಾಬಾಯಿಯವರನ್ನೂ ನೋಡಬಹುದು" ಎಂದು ಲಲಿತೆಯನ್ನು ಸಮಾಧಾನ ಪಡಿಸುತ್ತಿದ್ದಳು. ಆದರೆ ಯಾವ ಸಮಾಧಾನವೂ ಲಲಿತೆಯ ಹೃದಯದ ಕೊರಗಿನ ಮೊನೆಯನ್ನು ಸವೆಯಿಸಲಿಲ್ಲ. ಹೀಗಾದರೆ ಅವಳು ಬದುಕುವ ಬಗೆ ಹೇಗೆಂಬ ದುಗುಡದಿಂದ ನಾಗಿಯು ಬಹಳ ತಳಮಳಗೊಂಡಿದ್ದಳು. ಲಲಿತೆಯನ್ನು ನೋಡಿದಾಗಲೆಲ್ಲಾ ಅವಳ ಕಣ್ಣಲ್ಲಿ ನೀರು ತುಂಬಿ ಬರುತ್ತಿತ್ತು.

ಇನ್ನು ಮುಚ್ಚುಮರೆಮಾಡಿದರೆ ಫಲವಿಲ್ಲೆಂದು ಒಂದು ದಿನ ನಾಗಿಯು ಲಲಿತೆಗೆ ಎಲ್ಲವನ್ನೂ ಸ್ಪಷ್ಟವಾಗಿ ಹೇಳಿಬಿಟ್ಟಳು. "ಮಗು ಲಲಿತ, ಇನ್ನು ನೀನು ಶಾಲೆ ಮತ್ತು ಸುಮಿತ್ರಾಬಾಯಿಯವರ ಯೋಚನೆ ಬಿಡಬೇಕು. ಈ ಪಾಪಿನಿಯ ಗರ್ಭದಲ್ಲಿ ಹುಟ್ಟಿದ ನಿನಗೆ ವಿದ್ಯೆ, ಬುದ್ಧಿ ಕಲಿತು, ಮದುವೆಯಾಗಿ ಮಾನವಂತ ಜೀವನ ನಡಿಸುವ ಭಾಗ್ಯವಿಲ್ಲ. ನೀನಿನ್ನು ಪತಿತೆ. ಸಮಾಜವು ಆ ಮುದ್ರೆಯನ್ನು ಇಷ್ಟರಲ್ಲೇ ನಿನ್ನ ಹಣೆಗೊತ್ತಿಬಿಟ್ಟಿರುವುದು.

ಅಂದಮೇಲೆ ಈ ರೀತಿ ಕೊರಗಿ ನಿನ್ನ ಶರೀರವನ್ನು ಕರಗಿಸಿಕೊಂಡೇನು ಫಲ ಮಗು? ಹೇಗೂ ಆದುದಾಯಿತು. ಶಿವಾನಂದರ ಉಪಟಳದಿಂದಾಗಿ ಅತ್ಯಾಚಾರದಿಂದಾಗಿ ನಿನ್ನ ಜೀವನಲತೆಯು ಬೇರುಮುರಿದು ನೆಲಕ್ಕೊರಗಿರುವುದು. ಇನ್ನು ಅದರ ಬುಡಕ್ಕೆನೇ ಗೊಬ್ಬರ ಹಾಕಿ ಅದರಿಂದ ಆದಷ್ಟು ಫಲ ಪಡೆಯುವುದೊಂದೇ ದಾರಿಯುಳಿದಿರುವುದು. ಮಗು, ನೀನೀರೀತಿ ಜೀವನವನ್ನು ಹಾಳುಮಾಡಿಕೊಂಡು ಫಲವೇನು? ಇದೇ ರೀತಿ ನಡೆದರೆ ಹೆಚ್ಚುಕಾಲ ಬದುಕಲಾರೆ. ನನಗೂ...." ಎನ್ನುವಷ್ಟರಲ್ಲಿ ನಾಗಿಯ ಕುತ್ತಿಗೆಯು ಕಟ್ಟಿಹೋಯಿತು. ಅವಳು ಬಾಯ್ಬಿಟ್ಟು ಅತ್ತುಬಿಟ್ಟಳು. ಆದರೆ ಲಲಿತೆಯ ಬಾಯಿಯಿಂದ ಒಂದು ಶಬ್ದವೂ ಹೊರಡಲಿಲ್ಲ. ಒಂದೇ ಒಂದು ಬೊಟ್ಟು ಕಣ್ಣೀರಾದರೂ ಅವಳ ಕಂಗಳಿಂದ ಹೊರಬೀಳಲಿಲ್ಲ, ಗೊಂಬೆಯಂತೆ ಕೂತು ತಾಯಿಯು ಹೇಳುವುದನ್ನೆಲ್ಲಾ ಕೇಳುತ್ತಿದ್ದಳವಳು.

ಈ ಮಧ್ಯೆ ನರಸಿಂಹನು ಆಗಾಗ ಬಂದು, ಲಲಿತೆಗೆ ಸೌಖ್ಯವಾಗಿರುವುದೋ ಎಂದು ನೋಡಿ ಹೋಗುತ್ತಿದ್ದನು. ಶಿವಾನಂದರ ಕಾಮದಾಹವು ಅವನನ್ನು ನಾಗಿಯ ಮನೆಗಟ್ಟುತ್ತಿತ್ತು. ಶಿವಾನಂದರಿಗೀಗ ಇಡಿ ಮುಳುಗಿದ ಮೇಲೆ ಚಳಿಯೇನೂ ಇರಲಿಲ್ಲ. ಮೊದಮೊದಲು ಸಮಾಜವು ಏನು ಮಾಡಿಬಿಡುವುದೋ ಎಂಬೊಂದು ಭೀತಿ ಅವರಲ್ಲಿತ್ತು. ತಾನೊಬ್ಬ ಸನ್ಯಾಸಿ, ಹಾಗೆಲ್ಲ ಮಾಡುವುದು ತಪ್ಪೆಂದು ಮನಸ್ಸಾಕ್ಷಿಯೂ ಕೂಗಿಡುತ್ತಿತ್ತು. ಆದರೆ ಸಮಾಜವು ಕೆಲಸಮಯ ಮಾತ್ರ ಬರಿಯ ಗುಲ್ಲೆಬ್ಬಿಸಿ ಸುಮ್ಮನಾದುದರಿಂದ, ಮಾತ್ರವಲ್ಲದೆ ತನ್ನನ್ನು ಯಥಾಪ್ರಕಾರ ಮಾನಿಸ ಹತ್ತಿದುದರಿಂದ ಅದರ ಹಣೆಬರಹ ಇಷ್ಟೇ ಎಂದವರು ಬೆಲೆಕಟ್ಟಿ ನಿರ್ಭಯರಾದರು. ಮನಸ್ಸಾಕ್ಷಿಯ ಕೂಗಿನ ಕುತ್ತಿಗೆಯನ್ನೇ ಹಿಸುಕಿಬಿಟ್ಟರು. ಮೊದಮೊದಲು ಬೀದಿಹೋಕರ ಅಪಹಾಸ್ಯದ ಕೂಗು ಅವರ ಹೃದಯವನ್ನೊಮ್ಮೆ ತಿವಿದು ಬಿಡುತ್ತಿತ್ತು. ಆ ಮೇಲೆ ಅದವರಿಗೆ ಅಭ್ಯಾಸವಾಗಿ ಹೋಯಿತು. ಹುಸಿನಗೆಯಿಂದ ಅದನ್ನವರು ಮೂಲೆಗೊತ್ತುತ್ತಿದ್ದರು. ಶಿವಾನಂದರಿಗೆ ಶಿವಪುರದಲ್ಲಿ ಹುಡುಗಿಯರಿಗೇನೂ ಬರಗಾಲಬಿದ್ದಿರಲಿಲ್ಲ. ಅವರನ್ನೊದಗಿಸಿ ಕೊಡುವ ದಲಾಲಿಗಳಿಗೂ ಕೊರತೆಯಿದ್ದಿಲ್ಲ. ಯಾಕೆಂದರೆ ಶಿವಪುರ ಮಠದಲ್ಲಿದ್ದ ಹೆಚ್ಚಿನವರೆಲ್ಲಾ ಅವರು ಹೇಳಿದಂತೆ ಕುಣಿಯಲು ಸಿದ್ಧರಿದ್ದವರು. ಅವರೇನಾದರೂ ಆಜ್ಞಾಪಿಸಿದ

ರೆಂದರೆ, 'ಪರಾಕೆ, ಬುದ್ಧಿ'ಯೆಂದು ಎಂತಹ ನೀಚಕೃತ್ಯ ಮಾಡಲೂ ಹೇಸು ವವರಲ್ಲ. ಅಷ್ಟೊಂದು ಕೆಟ್ಟುಹೋಗಿತ್ತು ಮಠದ ವಾತಾವರಣ. ಯಾವುದು ಧರ್ಮಪೀಠವಾಗಿ ಧರ್ಮಪ್ರಚಾರ, ನೀತಿನಿಯಮ ಪಾಲನೆ, ಸಮಾಜದ ಸಂಘಟನೆ ಮತ್ತು ಕ್ಷೇಮ ಸಾಧನೆಯ ಉಪಕರಣವಾಗಿ, ಆತ್ಮತೇಜಸ್ಸಿನ ಪವಿತ್ರ ವಾತಾವರಣವಾಗಿರಬೇಕಿತ್ತೋ ಅದೇ ಇಂದು ಅಧರ್ಮ, ಅನೀತಿ, ಅನಾಚಾರದ ತವರುಮನೆಯಾಗಿ, ಕೊಳತು ಹುಳತು ನಾರುತ್ತಿತ್ತು. ವೇಶ್ಯೆಯರನ್ನು ಶಿವಾನಂದರಿಗೆ ತಂದುಕೊಡುವ ಮಾತಂತಿರಲಿ, ತಮ್ಮ ಸ್ತ್ರೀಯರನ್ನೂ ಅವರ ಕಾಮದಾಹದ ಬಾಯಿಗೆ ಬಲಿಕೊಡಲು ಮುಂದಾಗು ತ್ತಿದ್ದ ಲಂಡರಿಗೇನೂ ಮಠದಲ್ಲಿ ಕಡಿಮೆಯಿದ್ದಿರಲಿಲ್ಲ. ಮಠದಲ್ಲಿದ್ದವರೆಲ್ಲಾ ಅವರಿಗೆ ಅನುಕೂಲರಾಗಿಯೇ ಇದ್ದರು. ಅವರ ದುರ್ವರ್ತನೆಯನ್ನು ಧೈರ್ಯ ದಿಂದ ವಿರೋಧಿಸುವ ನೈತಿಕ ಬಲವುಳ್ಳ ಒಬ್ಬನೇ ಒಬ್ಬ ವ್ಯಕ್ತಿಯಾದರೂ ಶಿವ ಪುರ ಮಠದಲ್ಲಿರಲಿಲ್ಲ. ಎಲ್ಲರೂ ಶಿವಾನಂದರ ತಾಳಕ್ಕೆ ತಕ್ಕಂತೆ ಹೆಜ್ಜೆ ಹಾಕು ವವರು. ಅವರ ಅಧಿಕಾರ, ಅವರ ಧನದೌಲತ್ತು, ಅವರ ಆಸ್ತಿ, ಅವರ ಶಕ್ತಿ ಯಿಂದೆಲ್ಲಾ ಅವರಿಗೇನು ಮಾಡಲೂ ಸಾಧ್ಯವಿದೆ. ನಾಳೆ ತಮ್ಮನ್ನು ಹೊರ ಹಾಕಿದರೆ ತಮ್ಮ ಪಾಡೇನು? ಅವರೇನು ಬೇಕಾದರೂ ಮಾಡಲಿ ತಮಗೇನು? ಎಂಬ ತಮ್ಮ ತಮ್ಮ ಸುರಕ್ಷಿತತೆಯ ಸ್ವಾರ್ಥಭಾವನೆಯು, ಅಭಿಮಾನ ಶೂನ್ಯತೆ ಯು, ಆತ್ಮಬಲದ ಅಭಾವವು ಸ್ವಲ್ಪ ಸ್ವಗೌರವವಿದ್ದ ಕೆಲವರನ್ನೂ ಪೌರುಷ ರಹಿತರನ್ನಾಗಿ ಮಾಡಿಬಿಟ್ಟಿದ್ದಿತು. ಅವರು ಯಂತ್ರದೋಪಾದಿ ತಮ್ಮ ನಿಯ ಮಿತ ಕೆಲಸಮಾಡಿ ಮಜೂರಿ ಪಡೆದು ಸುಮ್ಮನಿರುತ್ತಿದ್ದರು. ಸಮಾಜದ ಕಣ್ಣಿಗೆ ಮಣ್ಣುಹಾಕಲು ಮಠದಲ್ಲಿ ಪೂಜೆ ಪುನಸ್ಕಾರ, ಪಠನ ಪಾರಾಯಣ, ವಾಚನ ಭಜನೆ ಕೀರ್ತನೆ ಆರಾಧನೆ, ವ್ರತ ನಿಯಮ ನಿಷ್ಠೆ, ದಾನ ಧರ್ಮ ದಕ್ಷಿಣೆ ಯೆಲ್ಲಾ ಸಾಂಗವಾಗಿ ನಡೆಯುತ್ತಿದ್ದಿತು. ಈ ಕಣ್ಣು ಕಟ್ಟೊಂದು ನಡೆದರೆ ಸರಿಯಷ್ಟೆ ಸಮಾಜಕ್ಕೆ! ಮತ್ತೇನು ಬೇಕು? ಹೊರಗಣ ವೇಷಭೂಷಣಗಳು ಸರಿಯಾಗಿದ್ದರಾಯಿತು, ಒಳಗೆ ಎಂತಹ ಕೊಳಕಿದ್ದರೇನು?

ಶಿವಾನಂದರು, ಜನತೆಯ ದೌರ್ಬಲ್ಯ ಸಮಾಜದ ಅಸಡ್ಡೆಯಿಂದಾಗಿ ಚೆನ್ನಾಗಿ ಪಳಗಿದ ವಿಟಪುರುಷನಂತಾಗಿ ಬಿಟ್ಟರು. ನಗೆನಾಚಿಕೆ ಮಾನ ಮರ್ಯಾದೆಯ ಲವಲೇಶವೂ ಅವರಿಗಿಲ್ಲದಾಯಿತು. ಅವರ ಕಾಮ

ಲಾಲಸೆಯು ದಿನೇ ದಿನೇ ಅಧಿಕವಾಗಹತ್ತಿತು. ಅವರು ಸಾಮಾನ್ಯ ವಿಟರಂತೆ ರಾತ್ರಿ ಮಠ ಬಿಟ್ಟು ಹೊರಹೋಗಲಾರಂಭಿಸಿದರು. ಅದಕ್ಕಾಗಿ ಸೆಲೂನ್ ಕಾರೊಂದನ್ನು ತೆಗೆದುಕೊಂಡಿದ್ದರು. ನರಸಿಂಹನ ಕೆಲಸವು ಇಂದೀಗ ಬಹಳ ಸುಲಭವಾಗಿತ್ತು. ಹುಡುಗಿಯರನ್ನು ಗುಟ್ಟಿನಲ್ಲಿ ಮಠಕ್ಕೆ ಕರದೊಯ್ದು ಕೊಡುವ ಕಷ್ಟವು ಅವನಿಗೆ ತಪ್ಪಿತ್ತು. ಶಿವಾನಂದರು ಇಂದು ರಾತ್ರಿ ಕಾರಿನಲ್ಲಿ ಅಲ್ಲಿ ಹೋದರು, ಇಲ್ಲಿ ಹೋದರು ಎಂಬ ಉತ್ತೇಜಕ ಸುದ್ದಿಯು ದಿನದಿನ ಶಿವ ಪುರದಲ್ಲಿ ಹಬ್ಬುತ್ತಿತ್ತು. ಸುದ್ದಿಯ ದೂತರು ಹೇಗಾದರೂ ಮಾಡಿ ಆ ರಹಸ್ಯ ವನ್ನು ಬಯಲಿಗೆಳೆದು ಬಿಡುತ್ತಿದ್ದರು. ಶಿವಪುರಸ್ಥರಿಗೂ ಈ ಸುದ್ದಿಗಳು ನಿತ್ಯಗಟ್ಲೆಯವುಗಳಾಗಿ ಬಿಟ್ಟವು. ಕ್ಷಣಕಾಲದ ಉದ್ವೇಗವನ್ನಷ್ಟೇ ಉಂಟು ಮಾಡಿ ಅವು ಆರಿಹೋಗುತ್ತಿದ್ದವು. ಶಿವಾನಂದರ ವಿಷಯ ಲಾಲಸೆಯು,ಕಾಮ ಚೇಷ್ಟೆಯು ಅದಾವ ರೂಪದಲ್ಲೆಲ್ಲಾ ಆವಿಷ್ಕಾವಾರಗುತ್ತಿತ್ತೆಂಬುವುದನ್ನು ಬರೆ ಯುತ್ತಾ ಹೋದರೆ ಅದಕ್ಕಾಗಿಯೇ ಇನ್ನೊಂದು ಪುಸ್ತಕ ಬೇಕಾದೀತು. ನಮ್ಮ ಲೇಖನಿಯು ಮುಟ್ಟದಷ್ಟು ಹೇಯವಾಗಿರುವ ಅವರ ಭೋಗವಿಲಾ ಸದ ಸಂಗತಿಗಳನ್ನು ನಾವಿಲ್ಲಿ ವಿವರಿಸಹೋಗದೆ ನಮ್ಮ ವಾಚಕರ ಕಲ್ಪನೆಗೇನೇ ಅದನ್ನು ಬಿಟ್ಟುಬಿಡುವೆವು. ಶಿವಾನಂದರು ಶೋಕು ಡ್ರೆಸ್ ಹಾಕಿಕೊಂಡು ಆ ಊರಿಗೆ ಹೋದರು, ಅಲ್ಲಿ ಹಾಗೆ ಮಾಡಿದರು,'ಫುಲ್‌ಸೂಟ್' ಹಾಕಿಕೊಂಡು ಆ ನಾಟಕ ನೋಡಹೋದರು, ಈ ಸರ್ಕಸ್ ನೋಡಿದರು, ಇಂದು ರಾತ್ರಿ ಅಲ್ಲಿ ಧಾವಿಸಿದರು, ಆ ಮನೆಗೆ ಪ್ರವೇಶಿಸಿದರು, ಎಂದೆಲ್ಲಾ ಸುದ್ದಿಗಳ ಮೇಲೆ ಸುದ್ದಿಗಳು ಶಿವಪುರದ ವಾತಾವರಣವನ್ನು ದಟ್ಟವಾಗಿ ಕವಿದು ಬಿಟ್ಟವು. ಕಾಕ-ಪೋಕರಿಗದು ದಿನ ನಿತ್ಯದ ಅತ್ಯಂತ ರುಚಿಕರ ಆಹಾರವಾ ಗಿದ್ದಿತು. ಅದಕ್ಕವರು ಬೇಕುಬೇಕಾದ ಬಣ್ಣಕೊಟ್ಟು ಕತೆಕಟ್ಟಿ ಹೇಳುತ್ತಿ ದ್ದರು. ಆದರೂ ಶಿವಪುರದ ಪ್ರತಿಷ್ಠಿತ ಸಮಾಜದ ಹೃದಯವು ಅದರಿಂದ ಒಂದಿಷ್ಟು ಕಂಪಿಸಲಿಲ್ಲ. ಶಿವಾನಂದರ ಸ್ಥಾನ-ಮಾನಕ್ಕೆ ಒಂದಿಷ್ಟೇನೂ ಧಕ್ಕೆ ಯುಂಟಾಗಲಿಲ್ಲ. ಅದರ ಬದಲಿಗೆ, ಆವರು ಬಹಳ ಬುದ್ಧಿಶಾಲಿ, ಕಾರ್ ಭಾರಿ, ಏನುಮಾಡುವುದಕ್ಕೂ ಶಕ್ತಿಯುಳ್ಳವರೆಂಬ ಖ್ಯಾತಿ ಮತ್ತು ಭೀತಿಯ ಭೂಷಣವೇ ಅವರಿಗೆ ದೊರೆಯಹತ್ತಿತು. ಇದೀಗ ಸಮಾಜದ ಇಂದಿನ ರೀತಿ.

ಶಿವಾನಂದರೊಂದು ದಿನ, "ಏನೋ ನರಸಿಂಹ, ಆ ಲಲಿತೆಗಿನ್ನೂ ಸೌಖ್ಯ

ವಾಗಿಲ್ಲವೇ? ನಾಳೆ ರಾತ್ರಿ ನನಗಲ್ಲಿ ಹೋಗಲೇಬೇಕು" ಎಂದು ಬಿಟ್ಟರು ನಿರ್ಧಾರ ಪೂರ್ವಕವಾಗಿ. ನರಸಿಂಹನು ಆಗ ಬೇರೇನು ಹೇಳುವುದಕ್ಕೂ ಹೆದರಿ, "ಆಯ್ತು ಬುದ್ಧಿ" ಎಂದು ಬಿಟ್ಟನು. ಕೈಯ ಪಕ್ಷಿಯು ಎಷ್ಟೊಂದು ಸುಂದರವಾಗಿದ್ದರೂ, ಕೈಗೆ ಸಿಗದೆ ದೂರದ ಮರದಲ್ಲಿ ಎಲೆಗಳ ಮರೆಯಲ್ಲಿ ಕುಳಿತಿರುವ ಪಕ್ಷಿಯ ಮೇಲೆ ಕಣ್ಣುಹಾಕಿ ಅದನ್ನು ಪಡೆಯಲು ಹಾತೊರೆಯುವುದು ಮಾನವನ ಸ್ವಾಭಾವಿಕವಾದೊಂದು ಮನೋವೃತ್ತಿ. ಅಂತೆಯೇ ಶಿವಾನಂದರು ಎಲ್ಲೆಲ್ಲಿ ಹೋಗಿ ಎಷ್ಟು ಮಂದಿ ಸ್ತ್ರೀಯರನ್ನೆಲ್ಲಾ ಕಾಮಿಸಿ ರಮಿಸಿದರೂ, ಲಲಿತೆಯ ಮೇಲಿನ ಅವರ ಕಾಮತೃಷೆಯು ಒಳಗೊಳಗೆ ಉರಿಯುತ್ತಿತ್ತು. ಆದರೆ, 'ಅವಳಿಗೆ ಇನ್ನೂ ಸೌಖ್ಯವಾಗಲಿಲ್ಲ, ಬಹಳ ಆಶಕ್ತಿಯಿದೆ, ಕೃಶವಾಗಿದ್ದಾಳೆಂ'ದು ನರಸಿಂಹನು ಲಲಿತೆಯನ್ನು ಆಗಾಗ ನೋಡಿ ಬಂದು ಹೇಳುತ್ತಿದ್ದುದರಿಂದ ಅದನ್ನವರು ನಿರ್ವಾಹವಿಲ್ಲದೆ ತಡೆದಿಟ್ಟುಕೊಳ್ಳುತ್ತಿದ್ದರು. ಆದರೆ ಅದು ತಡೆದಿಟ್ಟಷ್ಟು ಹೆಚ್ಚೆಚ್ಚು ಪ್ರಕೋಪಗೊಳ್ಳುತ್ತಿತ್ತು. ಕಡೆಗವರಿಗೆ ತಡಕೊಳ್ಳಲಾರದೆ ನರಸಿಂಹನೊಡನೆ ಮೇಲಿನ ಮಾತನ್ನು ಹೇಳಿದರು. ಅವನು ಮೊದಲು, "ಆಯ್ತು ಬುದ್ಧಿ" ಎಂದು ಸುಮ್ಮನಾದವನು, ಸ್ವಲ್ಪ ಸಮಯವಾದ ಮೇಲೆ, "ಅಂದಿನಂತೆಯೇ ಆದರೆ? ಕೆಲವು ದಿನ ಹೋಗಲಿ ಪರಾಕೆ. ಇನ್ನೂ ಅವಳಿಗೆ ಸಂಪೂರ್ಣ ಸೌಖ್ಯವಾಗಲಿಲ್ಲ" ಎಂದನು. "ಯಾವಾಗ ಸೌಖ್ಯವಾಗುವುದೋ ಇನ್ನು?" ಎಂದು ನಿರಾಶೆಯ ಉದ್ಗಾರವೆತ್ತಿ ಸುಮ್ಮನಾದರು ಶಿವಾನಂದರು ಕಡೆಗೆ.

ದಿನಹೋದಂತೆ ಲಲಿತೆಯ ದುಃಖವು ಸ್ವಲ್ಪ ಸ್ವಲ್ಪ ಕಡಿಮೆಯಾಗುತ್ತಾ ಹೋದರೂ ದೇಹವು ಕೃಶವಾಗಿಯೇ ಇತ್ತು. ಜೀರ್ಣಶಕ್ತಿಯು ಹೆಚ್ಚಾಗಲಿಲ್ಲ. "ಏನು ಮಾಡುವುದು? ಇನ್ನೇನು ಮಾಡುವುದು?" ಎಂಬ ಚಿಂತೆಯಿಂದ ಸಾಗಿಯೂ ಸೊರಗಿ ಹೋಗಿದ್ದಳು. ಸಿಕ್ಕಿದವರೊಡನೆಲ್ಲಾ ಅವಳು ಮಾತಾಡುವ ಮಾತೇ ಇದು. ಅವಳಿಗೆ ಅದೇ ಒಂದು ಹುಚ್ಚು ಹಿಡಿದಂತಾಗಿತ್ತು. ಯಾರು ಏನು ಮದ್ದು ಹೇಳಿದರೂ ನಂಬಿ ಒಂದೊಮ್ಮೆ ಅತಿ ಉತ್ಸಾಹದಿಂದ ಲಲಿತೆಗದನ್ನು ಮಾಡುವಳು. ಆದರೆ ಅದು ನಿಷ್ಫಲವಾದಾಗ ಮತ್ತಷ್ಟು ನಿರುತ್ಸಾಹಪಡುವಳು. ಅವಳ ದಪ್ಪದೇಹದ ಮಾಂಸವು ಜಾರಹತ್ತಿತು. ಗಟ್ಟಿ ಮೈಗಟ್ಟು ಸಡಿಲಾಯಿತು. ಕಡೆಗೆ ಯಾರೋ

ಅವಳಿಗೊಂದು ಗುಟ್ಟಿನ ಮದ್ದು ಹೇಳಿದರು. "ಒಡನೆಯೇ ಅದು ಹೌದೆಂದು ತೋರಿತು ನಾಗಿಗೆ. ಗುಟ್ಟಾಗಿ ಆ ಮದ್ದನ್ನವಳು ತರಿಸಿಟ್ಟಳು. ಅಂದು ರಾತ್ರಿ ಲಲಿತೆಯು ಮಲಗುವಾಗ ನಾಗಿಯು ಅತ್ಯಂತ ಮಮತೆಯಿಂದ ಕರೆದು "ಮಗು ಹೀಗಾದರೆ ಬದುಕುವುದು ಹೇಗೆ? ನಾನು ಇವತ್ತು ಬೆಳಿಗ್ಗೆ ಡಾಕ್ಟರ್ ಗಂಗಾಧರರಾಯರ ಬಳಿಗೆ ಹೋಗಿ ಹೊಸ ಔಷಧಿಯೊಂದನ್ನು ತಂದಿದ್ದೇನೆ. ಅದನ್ನು ತೆಗೆದುಕೊಂಡರೆ ಯಾರಿಗಾದರೂ ಜೀರ್ಣಶಕ್ತಿಯುಂಟಾಗುವದಂತೆ. ದೇಹ ಪುಷ್ಟಿಯಾಗುತ್ತದಂತೆ. ಅದನ್ನು ಸ್ವಲ್ಪ ಕೊಡಲೇ?" ಎಂದಳು ಬಹಳ ಸಂದೇಹಗೊಂಡು. "ನಾನಿನ್ನು ಬದುಕಿ ಫಲವೇನಮ್ಮಾ? ಬೇಗನೇ ಸತ್ತರೆ ಲೇಸಲ್ಲವೇ?" ಎಂದಳು ಲಲಿತೆ ತೀವ್ರ ವೈರಾಗ್ಯಗೊಂಡು. "ಹಾಗೆ ಹೇಳ ಬಾರದು ಮಗು, ಹೇಳಬಾರದು! ನಾನು ನಿನ್ನ ತಾಯಿಯಲ್ಲವೇ? ನನ್ನ ಮಾತನ್ನು ಕೇಳಲಾರೆಯಾ? ಇದೇ ರೀತಿ ನಡೆದರೆ ನಾನೂ ಬದುಕುವ ಹಾಗಿಲ್ಲ ಮಗು." ಎಂದು ನಾಗಿಯು ದುಃಖಿಸಲಾರಂಭಿಸಿದಳು. ಲಲಿತೆಯು ಬಹಳ ಹೊತ್ತು ಏನನ್ನೋ ಆಲೋಚಿಸುತ್ತಾ ಸುಮ್ಮನಿದ್ದಳು. ಅವಳ ದೃಷ್ಟಿಯು ಕೋಣೆಯ ಕಿಟಕಿಯಿಂದ ಅತಿ ದೂರದ ದಿಗಂತಕ್ಕೆ ಹರಿದಿತ್ತು. ಅವಳ ಜೀವನದ ದೃಶ್ಯಗಳೆಲ್ಲಾ ನಿಸ್ತೇಜ ಚಂದ್ರಪ್ರಕಾಶದಿಂದ ತುಂಬಿದ ವಾತಾ ವರಣದ ಪರದೆಯ ಮೇಲೆ ಒಂದರ ನಂತರ ಇನ್ನೊಂದು ಪ್ರದರ್ಶಿತವಾದಂತಾ ಯಿತು. ಅವಳು ನೋಡಿದಳು, ಅದನ್ನೇ ಮತ್ತೂ ನೋಡಿದಳು. ಆ ಮೇಲೆ ದೀರ್ಘ ಶ್ವಾಸಬಿಟ್ಟು ಫಕ್ಕನೆ ದೃಷ್ಟಿತಿರುಗಿಸಿ ನಾಗಿಯನ್ನು ನೋಡಿದಳು. ನಾಗಿಯು ದುಃಖಿಸಿ ದುಃಖಿಸಿ ಅಳುತ್ತಾ ಕುಳಿತಿದ್ದಳು. ಆಮೇಲೆ ಆದೇನೋ ಹೃದಯದ ದೊಡ್ಡ ವಿಪ್ಲವವನ್ನು ತಡೆಗಟ್ಟಿ ದಂತೆ ಒಂದೊಮ್ಮೆ ನಿಟ್ಟುಸುರಿಟ್ಟಳು. ತೆರೆಯೇರಿ ಬೀಳುವಂತಾಯಿತು ಹೃದಯಪ್ರದೇಶ. "ಆಯಿತಮ್ಮಾ, ಇನ್ನು ನೀನು ಹೇಳಿದಂತೆಯೇ ಮಾಡುವೆನು" ಎಂದಳು. ಆಕ್ಷಣವೇ ಅಷ್ಟರವರೆಗೆ ಆರಿ ಒಣಗಿಹೋಗಿದ್ದ ಅಶ್ರುಧಾರೆಯು ಒಂದೇ ಸವನೆ ಅವಳ ಕಂಗಳಿಂದ ಹರಿಯತೊಡಗಿತು. ಅವಳು ಎಷ್ಟೊಂದು ತಡಕೊಂಡರೂ ಸಾಧ್ಯವಾಗದೆ ಬಿಕ್ಕಿ ಬಿಕ್ಕಿ ಅಳತೊಡಗಿ ದಳು, "ಅಳಬೇಡ ಮಗು ಅಳಬೇಡ. ಈ ಹೊಸ ಮದ್ದಿನಿಂದ ನಿನಗೆ ಜೀರ್ಣಶಕ್ತಿಯೆಲ್ಲಾ ಸರಿಯಾಗಿ ಸೌಖ್ಯವಾಗುವುದು" ಎಂದು ನಾಗಿಯು

ವೈದಡವಿ ಸಂತೈಸಿ ಆಮೇಲೆ ಬಹಳ ಮೃದುವಾಗಿ, “ಮದ್ದು ಸ್ವಲ್ಪ ತರಲೇ?” ಎಂದಳು. “ಆಯ್ತು”ಎಂದಳು ಲಲಿತೆ ಬಹಳ ನಿಧಾನವಾಗಿ. ಆಗ ನಾಗಿಯು ಅಡಿಗೆ ಕೋಣೆಗೆ ಹೋಗಿ ಕವಾಟೊಂದರ ಬೀಗ ತೆಗೆದು ಒಂದು ಗ್ಲಾಸಿನಲ್ಲಿ ಸುಮಾರು ಅರೆವಾಸಿಗಿಂತಲೂ ಹೆಚ್ಚು ಮದ್ದನ್ನು ಹಾಕಿತಂದು, “ಇದನ್ನು ಕುಡಿದರೆ ಎಲ್ಲ ಸೌಖ್ಯವಾಗುತ್ತದೆ ಮಗು. ಸರಿ ನಿದ್ದೆ ಹಿಡಿದು ನಿನ್ನೀ ಚಿಂತೆ ಯೆಲ್ಲಾ ತೊಲಗಿ ಹೋಗುತ್ತದೆ. ಚೆನ್ನಾಗಿ ಜೀರ್ಣಶಕ್ತಿ ಬಂದು ದೇಹವು ಪುಷ್ಟಿಯಾಗುತ್ತದೆ. ಒಂದೇ ಸವನೆ ಕುಡಿದು ಬಿಡಬೇಕಂತೆ. ಸ್ವಲ್ಪ ಘಾಟರ ಬಹುದಂತೆ. ಡಾಕ್ಟರರು ಹೇಳಿರುವರು” ಎಂದಳು. ಗ್ಲಾಸು ಹಿಡಿದ ನಾಗಿಯ ಕೈನಡುಗುತ್ತಿತ್ತು. ಅವಳು ಬಹಳವಾಗಿ ತಲ್ಲಣಗೊಂಡಿದ್ದಳು. ಲಲಿತೆಯು ಗ್ಲಾಸನ್ನು ನಾಗಿಯ ಕೈಯಿಂದ ತೆಗೆದುಕೊಂಡು ಅವಳು ಹೇಳಿ ದುದೆಲ್ಲಾ ಸತ್ಯವೆಂದು ನಂಬಿ ಒಂದೇ ಸವನೆ ಕುಡಿದುಬಿಟ್ಟಳು. ಕುಡಿದೊಡ ನೆಯೇ ಹೊಟ್ಟೆಯಲ್ಲಿ ಬೆಂಕಿಯೆದ್ದಂತಾಯಿತು. ತಲೆ ತಿರುಗಹತ್ತಿತು. ಬಾಯಿಯೆಲ್ಲಾ ವಾಸನೆಯಿಂದ ತುಂಬಿತು. “ಅಮ್ಮಾ ನೀರು ಕೊಡು ನೀರು! ಎದೆಯೆಲ್ಲಾ ಸುಡುತ್ತಿದೆ!!” ಎಂದು ಕೂಗಿದಳು. ನಾಗಿಯು ಗಲಿಬಿಲಿ ಗೊಂಡು ಓಡಿ ಹೋಗಿ ಒಂದು ಲೋಟಿ ನೀರು ತಂದುಕೊಟ್ಟಳು. ಲಲಿತೆಯು ಒಂದೇ ಸವನೆ ಲೋಟಿಯ ನೀರನ್ನೆಲ್ಲಾ ಕುಡಿದಳು. “ಇನ್ನೊಂದು ಲೋಟಿ ತಾ. ಇನ್ನೂ ಸುಡುತ್ತಿದೆ” ಎಂದು ಮೊರೆಯಿಟ್ಟಳು ಲಲಿತೆ. ನಾಗಿಯು ಮತ್ತೂ ಒಂದು ಲೋಟಿ ತಂದುಕೊಟ್ಟಳು. ಲಲಿತೆಯ ಹೊಟ್ಟೆಯು ಉರಿಯು ಸ್ವಲ್ಪ ಶಾಂತವಾಯಿತು. ಆದರೆ ತಲೆತಿರುಗಿ ಲೋಕವೇ ಮೇಲೆ ಕೆಳಗಾದಂತಾಯಿತು. “ಶರಾಬು! ಶರಾಬು!! ಅಮ್ಮಾ ನನಗೆ ಶರಾಬು ಕೊಟ್ಟೆಯಾ?” ಎಂದು ಕೂಗಿ ಬೋಧತಪ್ಪಿ ಬಿದ್ದುಬಿಟ್ಟಳು.

---

## ಅಧ್ಯಾಯ ೬

### “ಅತಿಯಾಶೆಗೆ ಹೋಗಿ ಗತಿಗೇಡು ಮಾಡಿಕೊಳ್ಳಬೇಡಮ್ಮಾ! ಸ್ವಾಮಿರಿಗೆ ನಿನ್ನ ಹಣಕೊಡಬೇಡ”

ಪರಿಸ್ಥಿತಿಯನ್ನು ಗೆದ್ದು ಅದರ ಮೇಲೆ ಸ್ವಾಮಿತ್ವವನ್ನು ಸ್ಥಾಪಿಸುವ ಪೌರುಷವುಳ್ಳ ಮಾನವರಾದರೂ ಎಷ್ಟು ಮಂದಿ! ಎಲ್ಲವರೂ, ತಾವು ಹುಟ್ಟಿ ಬೆಳೆದ, ತಮ್ಮನ್ನು ಸುತ್ತುಮುತ್ತಲಿಂದಲೂ ಒತ್ತುತ್ತಿರುವ ವಿದ್ಯಮಾನಗಳ ಗುಲಾಮರು. ಪ್ರವಾಹದೊಂದಿಗೆ ಅನಾಯಾಸವಾಗಿ ತೇಲಿ ಸುಗಮವಾಗಿ ಜೀವನ ನಡಿಸುವ ಬದಲಿಗೆ ಅದಕ್ಕೆದೆಯೊಡ್ಡಿ ಅದಕೆದುರಾಗಿ ತೇಲುವ ಪ್ರಯಾಸವಾದರೂ ಯಾರಿಗೆ ಬೇಕಾಗಿದೆ? ಆದುದರಿಂದ ಸರ್ವಸಾಮಾನ್ಯವಾಗಿ ಜನರು ತಮ್ಮ ಪೌರುಷವನ್ನು ಕಳಕೊಂಡಾದರೂ, ಎಂತಹ ಅಧೋಗತಿ ಗೀಡಾದರೂ ಪರಿಸ್ಥಿತಿಯ ಕೈಗೂಸಾಗಿ ಹೋಗುವರು. ಲೋಕರೂಢಿಯೇ ಹೀಗಿರುವಾಗ ಲಲಿತೆಯಂತಹ ಬಾಲಿಕೆಯಾದರೂ ಏನುಮಾಡಿಯಾಳು! ಸುಮಿತ್ರಾಬಾಯಿಯ ನೀತಿಬೋಧೆಯ ಆಶ್ರಯವಿಲ್ಲದ ಅವಳ ಜೀವನವು ಚುಕ್ಕಾಣಿಯಿಲ್ಲದ ದೋಣಿಯಂತಾಯಿತು. ಏನುಮಾಡಿದರೂ ತಾನಿನ್ನು ಪತಿತೆ; ಸಮಾಜವು ತನ್ನ ಬೆನ್ನಿಗೆ ಆ ಕಳಂಕದ ಬರೆ ಹಾಕಿಬಿಟ್ಟಿರುವುದೆಂಬ ಚಿಂತಾಕೀಟವು ಅವಳ ಮನಸ್ಸನ್ನು ಕೊರೆ ಕೊರೆದು ದುರ್ಬಲಗೊಳಿಸಿತು. ವಿಶೇಷವಾಗಿ ತಾಯಿಯು, ಒಬ್ಬಳೇ ಮಗಳಾದ ತನ್ನನ್ನು ಪ್ರಾಣಕ್ಕಿಂತಲೂ ಹೆಚ್ಚೆಂದು ಬಗೆದು ಲಾಲಿಸಿ ಪಾಲಿಸಿ, ತನಗಾಗಿ ಎಂತಹ ಕಷ್ಟವೂ ಹೆಚ್ಚಿನದಲ್ಲೆಂದು ಭಾವಿಸಿಕೊಂಡಿರುವ ಆ ಪ್ರಿಯ ಮಾತೆಯು ಪ್ರತಿದಿನವೂ, ಕ್ಷಣಕ್ಷಣವೂ ತನ್ನನ್ನು ಕಂಡು ಕಣ್ಣೀರಿಡುತ್ತಾ, ಕೊರಗಿ ಕರಗುತ್ತಿರುವಾಗ ಅವಳನ್ನು ನಿರಾಶೆ ಪಡಿಸಿ ಅವಳ ಜೀವನವನ್ನು ಈ ಅಪರ ವಯಸ್ಸಿನಲ್ಲಿ ದುಃಖಮಯವಾಗಿ ಮಾಡಲು ಯಾವ ಮಗಳ ಮನಸ್ಸಾದರೂ ಒಪ್ಪೀತೆ? ಅದು ಹೊರತು ಲಲಿತೆಯ ಮುಂದಿನ ಗತಿಯಾದರೂ ಏನು? ಅವಳ ಜೀವನದ ಕೈದೀವಿಗೆಯಾಗಿದ್ದ ಸುಮಿತ್ರಾಬಾಯಿಯನ್ನವಳು ಪುನಃ ಆಶ್ರೈಸಲೇ? “ಛೆ! ಛೆ! ಈ ಕಳಂಕಿನಿಗಿನ್ನಾವಗತಿಯನ್ನವರು ತೋರಿಸುವುದು? ಅವರ ಮುಖವನ್ನಾದರೂ ಹೇಗೆ ನೋಡುವುದು?” ಎಂದು ಲಲಿತೆಯ ಮನಸ್ಸು ಹಿಂದೆಗೆಯುತ್ತಿತ್ತು.

ದಿನಹೋದಂತೆ ಲಲಿತೆಯ ಹಿಂದಿನ ಸ್ಮರಣೆಯು ಮಾಸಿಹೋಗಹತ್ತಿತು. ಶರಾಬು ಅವಳ ಶರೀರದ ಮೇಲೆ ಯಾವ 'ಟೋನಿಕೂ'ಮಾಡದ ಸತ್ಪರಿಣಾಮ ಮಾಡಿದಂತೆಯೇ ಮನಸ್ಸಿನ ಮೇಲೆ ದುಷ್ಪರಿಣಾಮ ಮಾಡಿತು. ನಾಗಿಗೀಗ ಸಂತೋಷವೇ ಸಂತೋಷ. ತನ್ನ ಮಗಳು ಸುಖ ವೈಭವದಲ್ಲಿ ಮೆರೆಯುವು ದನ್ನುಕಂಡು ಆನಂದಿಸುವ ಅವಳ ಅನುದಿನದ ಕಲ್ಪನೆಯ ಸ್ವರ್ಗವು ಇಂದೀಗ ಬಾಗಿಲಿಗೆ ಬಂದಿರುವುದೆಂದೇ ಭಾವಿಸಿ ಅವಳು ಉಬ್ಬಿ ನಲಿಯುತ್ತಿದ್ದಳು. ತನ್ನ ಜನ್ಮವಿನ್ನು ಸಾರ್ಥಕವಾಯಿತೆಂದು ಅವಳೆನಿಸಿಕೊಂಡಿದ್ದಳು. ಬಹಳ ಲಾವಣ್ಯ ವತಿಯಾಗಿಯೂ ಪುಷ್ಟಿಯಾಗಿಯೂ ಬೆಳೆದ ಲಲಿತೆಗೆ ಶಿವಾನಂದರು ಸಂಪೂರ್ಣ ವಾಗಿ ಒಲಿದುಹೋಗಿದ್ದರು. ಅವಳಿಗೆ ಬೇಕುಬೇಕಾದ ಚಿನ್ನಾಭರಣಗಳನ್ನೆಲ್ಲಾ ಮಾಡಿಸಿ ಹಾಕಿದ್ದರು. ಇದಕ್ಕೆಲ್ಲಾ ನಾಗಿಯೇಕಾರಣ. ಈಗ ತನ್ನ ಮಾತಿನಂತೆ ಕೇಳುವ ಲಲಿತೆಯ ಶರೀರವನ್ನವಳು ಶಿವಾನಂದರಿಗೆ ವಿಕ್ರಯಿಸಿ ಆಗಾಗ ಅದಕ್ಕೆ ತಕ್ಕ ಬೆಲೆಪಡೆಯುತ್ತಿದ್ದಳು. ಶಿವಾನಂದರಿಗೆ ಲಲಿತೆಯೆಂದರೆ ಪ್ರಾಣ. ಒಂದು ರಾತ್ರಿಯಾದರೂ ಅವರಿಗೆ ಅವಳನ್ನು ಬಿಟ್ಟಿರಲು ಸಾಧ್ಯವೇ ಆಗುತ್ತಿದ್ದಿಲ್ಲ. ಅವರೆಲ್ಲಿಯಾದರೂ ಊರುಬಿಟ್ಟು ಸಂಚಾರಕ್ಕೆ ಹೋದರೆಂದರೆ ರಾತ್ರಿ ಮೋಟರ್‌ಕಾರಿನಲ್ಲಿ ಲಲಿತೆಯು ಅವರ 'ಕ್ಯಾಂಪಿಗೆ' ಗುಪ್ತವಾಗಿ ಒಯ್ಯಲ್ಪ ಡಲೇ ಬೇಕು. ಶಿವಪುರ ಮಠದಲ್ಲಂತೂ ಕೆಲವು ವೇಳೆ ರಾತ್ರಿ ಹಗಲು ಶಿವಾನಂದ ಲಲಿತೆಯರ ಭೋಗವಿಲಾಸ ನಡೆಯುತ್ತಿತ್ತು. ಸ್ವಾಮಿಯರು ಲಲಿತೆ ಯನ್ನು ಎರಡು ಮೂರು ದಿವಸ ಮನೆಗೆ ಕಳುಹಿಸದೆ ಮಠದಲ್ಲಿಯೇ ಇರಿಸಿ ಕೊಳ್ಳುವುದೂ ಇತ್ತು. ಆಗ ನಾಗಿಯೂ ಮನೆಗೆ ಬಾಗಿಲುಹಾಕಿ ಬಂದು ಮಗಳೊಂದಿಗೆ ಮಠದಲ್ಲಿಯೇ ಇದ್ದುಬಿಡುತ್ತಿದ್ದಳು. ಮಠದಲ್ಲಿದ್ದ ಹಲವರಿಗಿದು ಅಸಹನೀಯವಾಗುತ್ತಿತ್ತು. ಆದರೆ ಮಾಡುವುದೇನು? "ಶಿವ ಶಿವ! ಏನನಾಚಾರ ಇದು!" ಎಂದು ಗುಪ್ತವಾಗಿ ಕೆಲಮಂದಿ ಮುದುಕಿಯರು ಉದ್ಗಾರವೆತ್ತಿ ಸುಮ್ಮನಾಗುತ್ತಿದ್ದರಷ್ಟೆ. ಶಿವಾನಂದರ ಭೋಗ ವಿಲಾಸವು ಮಠದೊಳಗೇನೇ ಅಪ್ರತಿಹತವಾಗಿ ನಡೆಯುತ್ತಿತ್ತು. ಶಿವಪೂಜೆಗೆ ಕೂಡ, ಮಠದ ಪಾರುಪತ್ಯಗಾರರು ನರಸಿಂಹನ ಮುಖಾಂತರ ಮೂರು ಮೂರು ಸಲ ನೆನೆಪುಮಾಡಿಸಿ ಅವರನ್ನು ಬರುವಂತೆ ಮಾಡಬೇಕಾಗಿದ್ದಿತು. ಶಿವಾನಂದರು ಕ್ಷಣಮಾತ್ರದಲ್ಲಿ ಪೂಜೆ ಮುಗಿಸಿ ಹೋಗಿಬಿಡುತ್ತಿದ್ದರು. ಒಂದಿಷ್ಟೇನಾದರೂ

ವಿಳಂಬವಾದರೆ ಉರಿದುಬೀಳುತ್ತಿದ್ದರು. ಪೂಜಾ ಸಾಹಿತ್ಯವನ್ನೊದಗಿಸಿ ಕೊಡುವ ಭಟ್ಟನಿಗೆ ಸಿಟ್ಟಿನ ಭರದಿಂದ ಹೊಡೆದುದೂ ಇದೆ.

ಶಿವಪುರದ ಪ್ರತಿಷ್ಠಿತ ಸಮಾಜವು ಶಿವಾನಂದರ ಭೋಗವಿಲಾಸದ ಕತೆಗಳನ್ನೆಲ್ಲಾ ರುಚಿಕರವಾಗಿ ಸವಿಸವಿದು ಜಡವಾಗಿ ಬಿದ್ದಿತಾದರೂ, ಹೆಚ್ಚೆಂದರೆ, "ಛಿ! ಛಿ!! ಮಠದೊಳಗೆನೇ ತಂದಿಟ್ಟುಕೊಂಡಿರುವರೇ? ಇನ್ನೇನೂ ಮಾಡಿಯಾರು ಅವರು!" ಎಂದಿಷ್ಟೇ ಛೀಕರಿಸಿ ತಣ್ಣಗಿದ್ದಿತಾದರೂ, ಕಾಕ ಪೋಕ ಕೂಟವು ಶಿವಾನಂದರನ್ನೇನೂ ಹಾಗೆಯೇ ಬಿಡಲಿಲ್ಲ. ಅದು ಶಿವಾನಂದರು ನೋಡ ಸಿಕ್ಕಿದಲ್ಲೆಲ್ಲಾ "ಲಲಿತೆ! ಲಲಿತೆ!!"ಯೆಂದು ಕೂಗಿಡುತ್ತಿತ್ತು. ಮಠ ಮತ್ತು ಶಿವಗುಡಿಯ ಗೋಡೆಗಳಲ್ಲೆಲ್ಲಾ ದೊಡ್ಡದೊಡ್ಡ ಕಪ್ಪು ಅಕ್ಷರಗಳಲ್ಲಿ'ಶಿವಾನಂದ ಲಲಿತಾ ವಿಲಾಸ' ಎಂದು ಬರೆದಿಟ್ಟಿತು. ಎಲ್ಲಿಯಾದರೂ ಲಲಿತೆಯು ಸಿಕ್ಕಿದಳೆಂದರೆ ಅವಳ ಬೆನ್ನುಹತ್ತಿ, "ಶಿವಾನಂದ! ಶಿವಾನಂದ!!" ಎಂದು ಕೂಗಿಟ್ಟುಕಾಡುತ್ತಿತ್ತು. ಇದರಿಂದಾಗಿ ಲಲಿತೆಗೆ ಸರಾಗವಾಗಿ ಹೊರಗೆ ಮುಖವೆತ್ತಿ ಹೋಗಲೂ ಇದ್ದಿಲ್ಲ. ಎಲ್ಲಿಯಾದರೂ ಅಪರೂಪವಾಗಿ ಶಿವಗುಡಿಗೆ ಹೋದಂಳೆದರೆ ಅಲ್ಲಿಯೂ ಅವಳಿಗೆ ಈ ತಲೆಹೋಕ ತರುಣರ ಕಾಟ ತಪ್ಪುತ್ತಿದ್ದಿಲ್ಲ.

ಇದೀಗ ತನ್ನ ಮನೋರಥವನ್ನು ಸಂಪೂರ್ಣವಾಗಿ ನೆರವೇರಿಸಿ ಕೊಳ್ಳುವ ಸಂದರ್ಭವೆಂದು ನಾಗಿಯು ಲಲಿತೆಯೊಡನೆ, ಇವತ್ತು ಸ್ವಾಮಿರೊಡನೆ ಆ ಚಿನ್ನವಾಗಬೇಕೆಂದು ಹೇಳು, ಈ ವಸ್ತ್ರ ತೆಗೆದುಕೊಡಹೇಳು, ಒಂದು ಒಳ್ಳೇ ಮನೆ ಕಟ್ಟಿಸಿಕೊಡಲು ಒತ್ತಾಯಮಾಡು ಎಂದೆಲ್ಲಾ ಪರಿಪರಿ ಹೇಳಿಕೊಟ್ಟರೂ ಲಲಿತೆಯು ಒಂದನ್ನೂ ಕೇಳದೆ ಶರಾಬು ಕುಡಿದು ತನ್ನ ದೇಹವನ್ನಷ್ಟೆ ಶಿವಾನಂದರ ಭೋಗಕ್ಕಾಗಿ ಒಪ್ಪಿಸಿ ಸುಮ್ಮನಿರುತ್ತಿದ್ದಳು. ನಾಗಿಯು ಬಹಳ ಒತ್ತಾಯಮಾಡಿದರೆ, "ಅದೆಲ್ಲಾ ನನ್ನಿಂದಾಗದು. ನೀನು ಬೇಕಾದರೆ ಕೇಳು" ಎಂದು ಬಿರುನುಡಿಯುತ್ತಿದ್ದಳು. ನಾಗಿಯು ಒಂದೊಮ್ಮೆ ನಿರಾಶೆಗೊಂಡರೂ ಅಷ್ಟರಲ್ಲೇ ಬಿಡದೆ ತಾನೇ ಸ್ವತಃ ಆಗಾಗ ಸ್ವಾಮಿರ ಬಳಿಗೆ ಹೋಗಿ ಮೊದಲು ಮಾತುಕೊಟ್ಟುದನ್ನು ನೆನಪುಮಾಡುತ್ತಿದ್ದಳು. "ಲಲಿತೆಗೊಂದು ಒಳ್ಳೇ ಮನೆ ಕಟ್ಟಿಸಿ ಹಾಕಬೇಕು ಸರಾಕೆ. ಜೀವನಕ್ಕೆ ಬೇಕಷ್ಟು ಆಸ್ತಿಯನ್ನೂ ಮಾಡಿಕೊಡಬೇಕು. ಆವಳಿಗೆ ಅದನ್ನೆಲ್ಲಾ

ನಿಮ್ಮೊಡನೆ ಹೇಳಲು ನಾಚಿಕೆಯಾಗುತ್ತದಂತೆ." ಎಂದು ಕಾಡುತ್ತಿದ್ದಳು. ಶಿವಾನಂದರು, "ಆಯ್ತು ಎಲ್ಲಾ ಮಾಡುವ· ಈಗ ಅವಸರವೇನು? ಒಳ್ಳೇ ಆಸ್ತಿಯೊಂದನ್ನು ಹುಡುಕುತ್ತಿದ್ದೇನೆ. ಅದರಲ್ಲೇ ಮನೆಕಟ್ಟಿಸಿದರೆ ಒಳ್ಳೇದಲ್ಲವೇ" ಎಂಬ ಸವಿ ಮಾತುಗಳಿಂದ ನಾಗಿಯನ್ನು ಸಮಾಧಾನಪಡಿಸುತ್ತಿದ್ದರು.

ಶಿವಾನಂದರು ಯಾರ ತಲೆ ಬಡಿದಾದರೂ, ಯಾವ ಸಂಚುವಂಚನೆ ಮಾಡಿಯಾದರೂ ತನ್ನ ವೆಚ್ಚಕ್ಕೆ ಬೇಕಷ್ಟು ಹಣ ಸಂಪಾದನೆ ಮಾಡಿಕೊಳ್ಳು ತ್ತಿದ್ದರು. ಅದರಿಂದಾಗಿಯೇ ಸಮಾಜವು "ಬುದ್ಧಿವಂತ, ಕಾರುಬಾರಿ" ಎಂಬ ಬಿರುದುಗಳ ಸನದನ್ನು ಅವರ ಕುತ್ತಿಗೆಗೆ ತೂಗಹಾಕಲು ಕಾರಣ. ಆದರೆ ಸ್ವಲ್ಪ ಸಮಯ ಎಲ್ಲವರನ್ನೂ ವಂಚಿಸಬಹುದು. ಕೆಲವರನ್ನು ಎಲ್ಲಾ ಸಮಯ ವಂಚಿಸಬಹುದು. ಎಲ್ಲವರನ್ನೂ ಯಾನಾಗಲೂ ವಂಚಿಸಲು ಸಾಧ್ಯವೇ ಇಲ್ಲ. ಶಿವಾನಂದರು ತನ್ನ ಸ್ಥಾನಮಾನದ ಬಲದಿಂದ ಕೆಲಸಮಯ ಹಲವರನ್ನು ತನ್ನ ಬಲೆಯೊಳಗೆ ಹಾಕಿ, ಮಂಕುಬೂದಿ ಬಳೆದು ಹಣ ಸಂಪಾದಿಸುತ್ತಿದ್ದರು. ಅವರಿವರಿಂದ ನಾಳೆ ನಾಡದು ಕೊಡುತ್ತೇನೆಂದು ಕೈಕಡವಾಗಿಯೇ ಹಲವು ಸಹಸ್ರ ರೂಪಾಯಿ ಪಡೆದರು. ಆಮೇಲೆ ಕೈಕಡ ಸಿಗಲಿಲ್ಲ. ಮಠದ ಚಿನ್ನಾಭರಣಗಳು ಒಂದೊಂದಾಗಿ ಬೇಂಕಿಗೆ ಹೋದುವು. ದೇವರ ಮೇಲಿನ ತಮ್ಮ ಭಕ್ತಿಯ ಸಂಕೇತವಾಗಿ, ತಮ್ಮ ತ್ಯಾಗ ಬುದ್ಧಿಯ ಹೆಗ್ಗುರುತಾಗಿ, ಮಠವು ಧರ್ಮಪ್ರಚಾರಕ ಸಮಾಜೋಪಕಾರಿ ಸಂಸ್ಥೆಯೆಂಬ ವಿಶ್ವಾಸದಿಂದ ಭಜಕ ಜನರಿತ್ತಿದ್ದ ಉಂಬಳಿಯಾದ ಹೇರಳ ಆಸ್ತಿಯ ಉತ್ಪತ್ತಿಯು ದುರ್ವ್ಯಯವಾಗುವುದಂತಿರಲಿ; ಭಕ್ತ ಜನರು ದೇವಮೂರ್ತಿಯ ಮೇಲಿನ ತಮ್ಮ ನಿತಾಂತ ಭಕ್ತಿಯ ಬಾಹ್ಯ ಸ್ವರೂಪವಾಗಿ ಕಷ್ಟಾರ್ಜಿತ ದ್ರವ್ಯದಿಂದ ತಯಾರಿಸಿ ಸಮರ್ಪಿಸಿದ ಚಿನ್ನಾಭರಣಗಳೆಲ್ಲಾ ಬೇಂಕಿನ ತಿಜೋರಿಯೊಳಗೆ ಸೇರಿದುವು. ಆವಶ್ಯಕತೆಯು ಯಾವ ವಿಧಿ ನಿಯಮ ವನ್ನಾದರೂ ಗಣಿಸುವುದೇ? ಶಿವಾನಂದರ ಭೋಗವಿಲಾಸವು ಹೆಚ್ಚಿದಂತೆ ವೆಚ್ಚವೂ ದಿನೇ ದಿನೇ ಬೆಳೆಯಿತು. ಹಣದ ಅಡಚಣೆಯು ಅವರ ಜೀವವನ್ನೇ ತಿನ್ನಹತ್ತಿತು. ಒಮ್ಮೊಮ್ಮೆ ಅವರಿಗೆ ಐದು ಹತ್ತು ರೂಪಾಯಿಗಳ ಅಡಚಣೆಯೂ ಆಗಿ ಏನುಮಾಡುವುದೆಂದು ತೋಚದೆ ತಳಮಳಿಸುತ್ತಿದರು.

ನಾಗಿಯು ಬಹಳ ಸೂಕ್ಷ್ಮದವಳು. ಜೀವನದಲ್ಲೊಂದು ಕ್ರಮವಿದ್ದ

ವಳು. ಎಂದಿಗೂ ಕ್ರಮತಪ್ಪಿ ಹೋಗುತ್ತಿದ್ದೇ ಇಲ್ಲ. ಪ್ರಾಯದ ಕಾಲದಲ್ಲಿ ಸಿಕ್ಕಾಬಟ್ಟೆಯಾಗಿ ಶರೀರವನ್ನು ವಿಕ್ರಯಿಸಿ ತುಚ್ಛ ಸುಖೋಪಭೋಗದಲ್ಲಿ ಮುಳುಗಿ ದ್ವಿಪಾದ ಪಶುವಿನಂತೆ ವರ್ತಿಸಲಿಲ್ಲ. ಪ್ರತಿಷ್ಠಿತರೆನಿಸುವ ಕೆಲವೇ ಮಂದಿಯನ್ನು ಮಾತ್ರ ನಂಬಿಕೊಂಡಿದ್ದಳು. ಮತ್ತು ಅವರಿಗೆ ಬೇಕಾದ ರುಚಿಕರವಾದ ತಿಂಡಿತಿನಸನ್ನೋ ಊಟ ಉಪಚಾರವನ್ನೋ ಮಾಡಿ ಹಾಕಿ ಒಲಿಸಿಕೊಳ್ಳುತ್ತಿದ್ದಳು. ಒಂದೇ ಮಾತಿನಲ್ಲಿ ಹೇಳುವುದಾದರೆ ನಾಗಿಯು ಮರ್ಯಾದೆಯ ಸೂಳೆಯಾಗಿದ್ದಳು. ಪ್ರಾಯ ಮೀರಿದ ಮೇಲೂ ತನ್ನ ಹಿಂದಿನ ಸ್ನೇಹಿತರಿಗೆ ಊಟಹಾಕುವುದನ್ನು ನಿಲ್ಲಿಸಲಿಲ್ಲ. ನಾಗಿಯ ಊಟದ ಸವಿಗಂಡ ಈ ಸದ್ಗೃಹಸ್ಥರು ಪೇಟೆಗೆ ಬಂದಾಗ ಊಟಕ್ಕೆ ಬೇರೆ ಎಲ್ಲಿಯೂ ಹೋಗುತ್ತಿದ್ದಿಲ್ಲ. ನಾಗಿಯೂ ತಾನು ಉತ್ತಮ ಜಾತಿಯವಳೆಂದು ಹೇಳಿಕೊಳ್ಳುತ್ತಿದ್ದಳು. ಅವಳು ಯಾವ ಜಾತಿಯವಳಾದರೂ ಸವಿ ತಿಂಡಿತಿನಿಸುಗಳಿಗೆ ಮರುಳಾಗದವರೇ ಅಪರೂಪವಲ್ಲವೆ? ನಾಲಿಗೆ ಸವಿಯಿಂದ ಮನಸ್ಸು ಅದೆಷ್ಟು ಬೇಗ ಸೂರೆಯಾಗಿ ಬಿಡುವುದು! ಹೀಗೆ ನಾಗಿಯ ಮನೆಗೆ ಆಗಾಗ ಊಟಕ್ಕೆ ಬರುತ್ತಿದ್ದ ಸದ್ಗೃಹಸ್ಥರು ಅವಳಿಗೇನಾದರೂ ಪ್ರತಿಫಲಕೊಟ್ಟು ಹೋಗುತ್ತಿದ್ದರು. ಅದವಳ ಊಟಕ್ಕೆ ಬೆಲೆಯಲ್ಲ,ಅವಳ ಮೆಹನತ್ತಿಗೆ ಪ್ರತಿಫಲ. ಹಿಂದೆ ನಾಗಿಯ ಸವಿ ತಿನಸುಗಳನ್ನು ತಿಂದು ಅವಳೊಡನೆ ಸುಖಿಸಿದ ಕೆಲವರು ನಾಗಿಗೆ ತಮ್ಮ ತಮ್ಮ ಶಕ್ತ್ಯಾನುಸಾರ ಈಗಲೂ ಸಹಾಯಮಾಡುತ್ತಿದ್ದರು. ಹೀಗೆ ನಾಗಿಯು ಕೆಲವೇ ಜನರ ಮನಸ್ಸನ್ನೊಲಿಸಿಕೊಂಡು ಅವರು ಆತ್ಮಸಂತೋಷದಿಂದಲೇ ಕೊಡುವ ಹಣವನ್ನೆಲ್ಲಾ ಸ್ವಲ್ಪಸ್ವಲ್ಪವಾಗಿ ಉಳಿಸಿ ನಾಲ್ಕೈದು ಸಾವಿರ ರೂಪಾಯಿಗಳನ್ನು ಬೇಂಕಿನಲ್ಲಿಟ್ಟದ್ದಳು. ಅದರ ಬಡ್ಡಿ ಕೂಡಾ ತೆಗೆದುಕೊಳ್ಳದೆ ಬೇಂಕಿನಲ್ಲಿದ್ದು ಹಾಗೆಯೇ ಬೆಳೆಯುತ್ತಿತ್ತು. ಇದು ಶಿವಾನಂದರಿಗೆ ತಿಳಿದಿತ್ತು. ಅಡಚಣೆಯ ಸಮಯದಲ್ಲಿ ಮನಸ್ಸು ಅದನ್ನು ನಿವಾರಿಸುವುದಕ್ಕಾಗಿ ಎಂತೆಂತಹ ತಂತ್ರಗಳನ್ನೆಲ್ಲಾ ಮಾಡುವುದೆಂದು ಹೇಳಬರುವುದಿಲ್ಲ. ಶಿವಾನಂದರು ಒಂದು ದಿನ ತನ್ನ ಬೈಠಕು ಖಾನೆಯಲ್ಲಿ ಗರ್ಜಿಯ ಸರಳಮಂಚದ ಮೇಲೆ ಪವಡಿಸಿ ಚಡಪಡಿಸುತ್ತಿದ್ದವರು ಜಗ್ಗನೆದ್ದು ನರಸಿಂಹನನ್ನು ಕರೆದು ಕೂಡಲೆ, ಕಾರುಕೊಂಡು ಹೋಗಿ ನಾಗಿಯನ್ನು ಕರೆತರ ಹೇಳಿದರು. ಅವನು ಕೂಡಲೆ ಹೋಗಿ ಅವಳನ್ನು ಕರೆತಂದನು.

"ನಾಗಿ, ನೀನು ಯಾವಾಗಲೂ 'ಆಸ್ತಿ, ಮನೆ' ಎಂದು ಕಾಡುತ್ತಾ ಇರುವೆಯಲ್ಲ. ಅದಕ್ಕಾಗಿ ಈಗ ಒಳ್ಳೇ ಆಸ್ತಿಯೊಂದನ್ನು ತೆಗೆದುಕೊಂಡು ಅದರಲ್ಲೊಂದು ಭವ್ಯ ಮನೆ ಕಟ್ಟಿಸುವ ನಿರ್ಧಾರಮಾಡಿದ್ದೇನೆ. ಶಿವಪುರ ದಿಂದ 5 ಮೈಲು ದೂರದಲ್ಲಿದೆ ಅದು. ಬಹಳ ಒಳ್ಳೇ ಆಸ್ತಿ. ಬಹಳ ಅನು ಕೂಲ. ಬಹಳ ಸಲೀಸಾಗಿಯೂ ಸಿಗುತ್ತದೆ. ಮತಕ್ಕಾದರೆ ಒಂದೆರಡು ಸಾವಿರ ಬಿಟ್ಟುಕೊಡಲಿಕ್ಕೂ ಆ ಆಸ್ತಿಯ ಮ್ಹಾಲಿಕ ಒಪ್ಪಿದ್ದಾನೆ. ಅವನೊಬ್ಬ ಬ್ರಾಹ್ಮಣ. ನಮ್ಮ ಪಾರುಪತ್ಯಗಾರರಿಗೂ ಅವನಿಗೂ ದೂರದ ಸಂಬಂಧವಿದೆ. ಅವನಿಗೀಗ ಜರೂರೊಂದು ಗರ್ಜಿಯಿದೆ. ನಾಳೆಯೇ ಬೇಂಕಿಗೆ ಕಟ್ಟಲು ರೂ. 5000 ಬೇಕಂತೆ. ಆಸ್ತಿಗೆ ಕಣ್ಣುಮುಚ್ಚಿ ರೂ. 12,000 ಕೊಡ ಬೇಕು. ನಮಗೆ ಮತ್ತೂ ಕಡಿಮೆಮಾಡಿ ರೂ. 10,000ಕ್ಕೆ ಕೊಡುವೆನೆಂದು ಹೇಳಿದ್ದಾನೆ. ಮನುಷ್ಯ ಒಳ್ಳೆಯವ, ಸಾಧುಪ್ರಾಣಿ. ನಮ್ಮ ಹತ್ತಿರ ಈಗ ನಾಳೆಗೆನೇ ಹಣ ಒದಗಿಸಲು ಸಾಧ್ಯವಿಲ್ಲ. ಒಂದು ವಾರದ ಮೇಲೆ ನಮ ಗೊಂದು ರೂ. 10,000 ಬರುವುದಿದೆ. ಒಂದು ಆಸ್ತಿ ಅಡವಿನ ಮೇಲೆ ಹಾಕಿದುದು. ಆ ಆಸಾಮಿ ಬೊಂಬಾಯಿಯಲ್ಲಿ ಹೊಟೇಲಿಟ್ಟು ದುಡ್ಡು ಮಾಡಿದೆ. ಅಡವಿನ ಹಣ ಕಟ್ಟುತ್ತದಂತೆ. ಆದರೆ ಒಂದು ಹಪ್ತೆಯವರೆಗೆ ಈ ಬ್ರಾಹ್ಮಣನಿಗೆ ಕಾಯಲು ಸಾಧ್ಯವಿಲ್ಲ. ಅವನಿಗೀಗ ರೂ. 5000 ನಾಳೆ ಆಗದೆ ನಿರ್ವಾಹವಿಲ್ಲವಂತೆ. ಏನು ಮಾಡುವುದೆಂದು ನಿನ್ನೊಡನೆ ವಿಚಾರಿಸಲು ನಿನ್ನನ್ನೀಗ ಕರೆಸಿದುದು" ಎಂದರು ಶಿವಾನಂದರು ನಾಗಿಯೊಡನೆ ಬಹಳ ಉತ್ಸಾಹಪರ ಮುಖಮುದ್ರೆಯಿಂದ. "ನಾನೇನು ಮಾಡುವುದು ಬುದ್ಧಿ? ನನ್ನ ಹತ್ತಿರ ಹಣವಿದೆಯೋ?" ಎಂದಳು ನಾಗಿ ಮಂದಹಾಸದಿಂದ. "ಅದೆಲ್ಲಾ ಕಣ್ಣುಕಟ್ಟು ಬೇಡ. ಬೇಂಕಿನಲ್ಲಿ ನಿನ್ನದು ಐದಾರು ಸಾವಿರ ರೂಪಾಯಿ ಇದೆಯಂತೆ. ಅದರಲ್ಲೀಗ ಒಂದು 4000 ರೂಪಾಯಿ ತೆಗೆದುಕೊಡು. ಬಾಕಿ ಒಂದು ಸಾವಿರ ನಾವು ಹೇಗಾದರೂ ಮಾಡಿ ಹಾಕುತ್ತೇವೆ. ಒಂದು ಹಪ್ತೆಯ ಮೇಲೆ ನಿನ್ನ ಹಣ ನಿನಗೆ ಹಿಂದೆಕೊಡುವ" ಎಂದರು ಸ್ವಾಮಿರು ಮುಗುಳ್ನಗೆ ಬೀರುತ್ತ ಬೀರುತ್ತ. ತನ್ನ ಮಗಳಿಗೊಂದು ಆಸ್ತಿ ಮತ್ತು ಮನೆಯಾಗಬೇ ಕೆಂಬ ಹುಚ್ಚೇ ಹಿಡಿದ ನಾಗಿಯ ಆನಂದಕ್ಕೀಗ ಪಾರವೇ ಇಲ್ಲದಾಯಿತು. ಆ ಆನಂದೋತ್ಸಾಹದ ಪ್ರವಾಹದಲ್ಲಿ ಅವಳ ವಿಚಾರ ವಿವೇಕವೆಲ್ಲವೂ ಕೊಚ್ಚಿ

ಹೋಯಿತು. ಅವಳು ಒಡನೆಯೇ, "ಆಯ್ತು ಪರಾಕೆ, ಈಗಿನ ಮಟ್ಟಿಗೆ ಹೇಗಾದರೂ ಮಾಡಿ ರೂ. ನಾಲ್ಕು ಸಾವಿರ ನಾನು ಕೊಡುತ್ತೇನೆ. ಒಂದು ಹಪ್ತೆಯ ನಂತರ ಮಾತ್ರ ಹಿಂದೆ ಕೊಡಬೇಕು. ತಪ್ಪಬಾರದು. ಆಸ್ತಿ ಮಾತ್ರವಲ್ಲ ಒಳ್ಳೆ ಮನೆಯೊಂದನ್ನೂ ಬೇಗನೆ ಕಟ್ಟಿಸಬೇಕು. ನಿಮಗೂ ಅದು ಅನುಕೂಲ ಪರಾಕೆ ಬಂದು ಹೋಗಲಿಕ್ಕೆ. ಈಗ ನಿಮಗೂ ತೊಂದರೆ ನಮಗೂ ತೊಂದರೆ. ಈ ಊರೇ ಬಿಟ್ಟು ದೂರವಿದ್ದು ಬಿಟ್ಟರೆ ಬಹಳ ಒಳ್ಳೇದು ಬುದ್ಧಿ" ಎಂದಳು. ಶಿವಾನಂದರು ಇಷ್ಟು ಸುಲಭವಾಗಿ ತನ್ನ ಕೆಲಸವಾಗುವುದೆಂದು ಎಣಿಸಿದ್ದಿಲ್ಲ. ಅವರಿಗೆ ಹೊಸ ಪ್ರಾಣವೇ ಬಂದಂತಾಯಿತು. ಅವರು "ನಿನಗೆ ಯಾವ ಸಂದೇಹವೂ ಬೇಡ. ನನ್ನ ಲಲಿತೆಯು ಸುಖವಾಗಿರುವಂತೆ ನೋಡುವುದು ನನ್ನ ಕರ್ತವ್ಯವಲ್ಲವೇ? ಸದಾ ಅದೇ ಯೋಚನೆಯಲ್ಲಿರುವ ನನಗೆ ನೀನು ಆ ವಿಷಯದಲ್ಲಿ ಹೇಳಬೇಕೇ? ನನಗೀಗ ಪೂಜೆಗೆ ಹೊತ್ತಾಯಿತು. ನೀನು ಹೋಗಿ ಇಂದೇ ಹಣತೆಗೆದು ರಾತ್ರಿ ತಂದು ಕೊಡು"ಎಂದರು. "ಆಯ್ತು ಬುದ್ಧಿ ಆಯ್ತು" ಎಂದು ನಾಗಿಯು ಹೊರಟು ಹೋದಳು. ನರಸಿಂಹನು ಅವಳನ್ನು ಕಾರಿನಲ್ಲೇ ಅವಳ ಮನೆಗೊಯ್ದು ಬಿಟ್ಟನು. ಈಗ ಎಲ್ಲವೂ ಬಹಿರಂಗವಾಗಿಯೇ ನಡೆಯುತ್ತಿತ್ತು. ನಾಗಿ ಲಲಿತೆಯರು ಶಿವಾನಂದರ ಪರಿವಾರಕ್ಕೆ ಸೇರಿಹೋಗಿದ್ದರು.

ಮನೆಗೆ ಹೋದೊಡನೆಯೇ ನಾಗಿಗೆ ಮತ್ತಷ್ಟು ಆನಂದವಾಯಿತು. ಆನಂದದುಬ್ಬಿನಲ್ಲಿ ಅವಳ ಶರೀರವು, ವಿಶೇಷ ಗಾಳಿ ತುಂಬಿದ ಕಾಲ್ಚೆಂಡಿನಂತೆ ನಿಂತಲ್ಲಿ ನಿಲ್ಲದೆ ನಲಿಯುತ್ತಿತ್ತು. ಅವಳು ಎರಡೆರಡು ಸಲ ಒಳ ಹೋದವಳು ಹೊರಬಂದು ರಸ್ತೆಯ ಕಡೆ ಇಣಿಕಿ ನೋಡಿ ಒಳಹೋದಳು. ಆ ಮೇಲೆ, "ಲಲಿತ! ಲಲಿತ!! ಎಲ್ಲಿರುವೆ?" ಎಂದು ಗಟ್ಟಿಯಾಗಿ ಕರೆದು ಲಲಿತೆಯ ಕೋಣೆಗೆ ಧಾವಿಸಿದಳು. ಕುರ್ಚಿಯ ಮೇಲೆ ಕುಳಿತು ಏನೋ ಪುಸ್ತಕವೊಂದ ನ್ನೋದುತ್ತಿದ್ದ ಲಲಿತೆಯನ್ನು ಫಕ್ಕನೆ ಬಿಗಿಹಿಡಿದು ಮುದ್ದಾಡಿ, "ಇನ್ನು ನಿನ್ನ ಭಾಗ್ಯೋದಯವಾಯಿತು ಮಗು! ನಿನಗೇನಿನ್ನು ಕಡಿಮೆಬರಲಿಕ್ಕಿಲ್ಲ. ನಾನಿನ್ನು ಸತ್ತರೂ ಚಿಂತೆಯಿಲ್ಲ" ಎಂದಳು. ನಾಗಿಯ ಹಠಾತ್ತಾದ ಈ ಉತ್ಸಾಹಕ್ಕೆ ಕಾರಣವೇನೆಂದು ತಿಳಿಯದೆ ಲಲಿತೆಯು ತುಸುಸಮಯ ವಿಸ್ಮಯ ಪಟ್ಟಳು. ಆ ಮೇಲೆ, "ಏನಮ್ಮಾ? ಏನಾಯಿತು ಅಂತಹದೀಗ?" ಎಂದು

ಪ್ರಶ್ನಿಸಿದಳು. "ಏನಾಯಿತೊ? ರೂಪಾಯಿ ಹತ್ತುಸಾವಿರದ ಆಸ್ತಿಯಾಯಿತು. ಆ ಮೇಲೊಂದು ಒಳ್ಳೇ ಮನೆ ಸ್ವಾಮಿರು ಕಟ್ಟಿಸುವಾಗ ರೂಪಾಯಿ ಐದು ಸಾವಿರವಾದರೂ ಅದಕ್ಕೆ ಖರ್ಚುಮಾಡದಿರಲಿಕ್ಕಿಲ್ಲ. ಇದು ಹೊರತು ನಾನು ಗಳಿಸಿಟ್ಟ ಹಣ ಐದು ಸಾವಿರ. ಒಟ್ಟು ರೂಪಾಯಿ ಇಪ್ಪತ್ತು ಸಾವಿರವಾಯಿತು. ಇನ್ನೇನು ಬೇಕು?" ಎಂದಳು ನಾಗಿ. "ಏನಾಯಿತಮ್ಮಾ ಸರಿಯಾಗಿ ಹೇಳ ಬಾರದೇ? ನಿನ್ನನ್ನೇಕೆ ಸ್ವಾಮಿರು ಕರೆಸಿದುದು?" ಎಂದಳು ಲಲಿತೆ ನಾಗಿಯ ಉತ್ಸಾಹದಲ್ಲಿ ಭಾಗಿಯಾಗದೆ ತಣ್ಣಗಿದ್ದು. ಆಗ ನಾಗಿಯು ತನ್ನನ್ನು ಸ್ವಾಮಿರು ಕರೆಸಿ ಹೇಳಿದ ಸಂಗತಿಗಳನ್ನೆಲ್ಲಾ ಹೇಳಿದಳು ಅತುಲ ಸಂತೋಷ ವನ್ನು ವಾಕ್ಯ ವಾಕ್ಯದಲ್ಲಿಯೂ ಹೊರ ಸೂಸಿ. ಇದನ್ನು ಕೇಳಿ ಲಲಿತೆಯು "ಇಷ್ಟೆಯೋ? ನೀನೀಗ ನಿನ್ನ ಹಣವನ್ನು ಬೇಂಕಿನಿಂದ ತೆಗೆದುಕೊಡಬೇಕೇ? ಅದಕ್ಕಾಗಿಯೇ ನಿನ್ನನ್ನು ಮೋಟರ್ ಕಾರ್ ಕಳುಹಿಸಿ ಕರೆಸಿದುದೇ? ಅತಿಯಾಶೆಮಾಡಿ ಗತಿಗೇಡು ಮಾಡಿಕೊಳ್ಳಬೇಡಮ್ಮಾ. ನಿನ್ನ ಹಣ ಸ್ವಾಮಿರಿಗೆ ಕೊಡಬೇಡ" ಎಂದಳು ಲಲಿತೆ ಸ್ವಾಭಾವಿಕವಾಗಿ ತನ್ನಲ್ಲಿ ಹುಟ್ಟಿದ ಸಂದೇಹದಿಂದ. ಆದರೆ ನಾಗಿಯು ಆದಕ್ಕೆ ಕಿವಿಗೊಡುವಳೇ? ಅವಳಿಗೇನು ಗೊತ್ತು ಶಿವಾನಂದರ ಆರ್ಥಿಕ ಪರಿಸ್ಥಿತಿ? "ಸಾಕು ಸಾಕು ನಿನ್ನ ಬುದ್ಧಿವಾದ! ನಿನಗೇನು ಗೊತ್ತು ಸ್ವಾಮಿರ ಸಂಗತಿ? ಅದಕ್ಕೆಲ್ಲಾ ನಾನು ಜವಾಬ್ದಾರಿ. ನೀನು ಸುಮ್ಮನಿರು" ಎಂದು ನಾಗಿಯು ತನ್ನ ಉಲ್ಲಾಸಕ್ಕೆ ಲಲಿತೆಯು ಇನ್ನೆಲ್ಲಿಯಾದರೂ ಭಂಗವನ್ನುಂಟುಮಾಡುವಳೋ ಎಂಬ ಅಸಹಿಷ್ಣುತೆಯಿಂದ ಕೂಡಲೆ ಕೋಣೆಬಿಟ್ಟು ಹೊರ ನಡೆದುಬಿಟ್ಟಳು.

---

## ಅಧ್ಯಾಯ ೭

### "ಅಮ್ಮಾ! ಅಮ್ಮಾ!! ಮಗುವೆಲ್ಲಿ? ಮಗುವೆಲ್ಲಿ?"

ಶಿವಾನಂದರು ಊರುಬಿಟ್ಟು ದೊಡ್ಡ ಸಂಚಾರಕ್ಕೆ ಹೊರಟು ಮೈಸೂರು ಸಂಸ್ಥಾನದ ಮುಖ್ಯ ಮುಖ್ಯ ಸ್ಥಳಗಳಿಗೂ, ಉತ್ತರ ಕನ್ನಡದ ಕೆಲವು ಪಟ್ಟಣಗಳಿಗೂ ಹೋಗಿ ಸುಮಾರು ಒಂದು ವರ್ಷದ ಮೇಲೆ ಹಿಂತಿರುಗಿ ದರು. ಸಾಲಿಗರ ಕಾಟದಿಂದ ಊರಲ್ಲಿ ನಿಲ್ಲಲಾರದೇನೇ ಅವರು ಇಷ್ಟೊಂದು

ದೀರ್ಘ ಸಮಯದ ಸಂಚಾರ ಕೈಕೊಂಡರು. ಅಲ್ಲೆಲ್ಲಾ ತನ್ನ ಶಿಷ್ಯ ವರ್ಗದವರು ಬಹಳ ಶ್ರೀಮಂತರಿದ್ದಾರೆ; ತಾನು ಕಡಿಮೆಯೆಂದರೆ ಅರ್ಧ ಲಕ್ಷ ರೂಪಾಯಿಗಳನ್ನಾದರೂ ಒಟ್ಟುಗೂಡಿಸಿ ತರುತ್ತೇನೆಂದು ಸಾಲಿಗರಿಗೆಲ್ಲಾ ಅಭಯವಿತ್ತು ಸಂಚಾರ ವೆಚ್ಚಕ್ಕಾಗಿ ಮತ್ತಷ್ಟು ಹಣ ಸಾಲಮಾಡಿ ತೆರಳಿದ್ದರು. ಆಗಾಗ ಬಂದು ಕಣ್ಣೀರಿಳಿಸಿ ಕಾಡುತ್ತಿದ್ದ ನಾಗಿಗೆ, ಸಂಚಾರದಿಂದ ಹಿಂತಿರುಗಿ ಬಂದೊಡನೆಯೇ ಆಸ್ತಿ ಮಾಡದಿದ್ದರೆ ತಾನಿದ್ದೂ ಸತ್ತಂತೆಂದು ಭಾಷೆಕೊಟ್ಟಿದ್ದರು. ಅವಳೂ ಇದರಿಂದ ಸಂತೃಪ್ತಳಾಗಿ ಸಂತೋಷದಿಂದಿದ್ದಳು. ಅವಳ ಸಂತೋಷಕ್ಕೆ ಇನ್ನೊಂದು ಕಾರಣವೂ ಇತ್ತು. ಲಲಿತೆಯು ಗರ್ಭಿಣಿಯಾಗಿದ್ದಳು. "ನನ್ನ ಲಲಿತೆಗೊಂದು ಗಂಡು ಕೂಸು ಹುಟ್ಟಬೇಕು; ಆ ಮೇಲೆ ನಾನು ಸತ್ತರೂ ಚಿಂತೆಯಿಲ್ಲ" ಎಂದು ಸದಾ ಹಾರೈಸಿಕೊಂಡಿದ್ದುದಲ್ಲದೆ ಅದನ್ನು ಮನೆಗೆ ಬಂದ ಬಂದವರೊಡನೆ ಮತ್ತು ನೆರೆಕರೆಯವರಲ್ಲೆಲ್ಲಾ ಬಾಯ್ಬಿಟ್ಟು ಹೇಳುತ್ತಿದ್ದ ನಾಗಿಯು ಈಗ ಬಹಳ ಆನಂದಗೊಂಡಿದ್ದಳು. ಹುಟ್ಟುವುದು ಗಂಡು ಮಗುವೆಂದೇ ಅವಳು ನಿಶ್ಚಯಮಾಡಿಕೊಂಡಿದ್ದಳು. ಆದರೆ ಈ ಸಂಗತಿಯು ಶಿವಾನಂದರಿಗಾಗಲಿ ನರಸಿಂಹನಿಗಾಗಲಿ ತಿಳಿದಿಲ್ಲ. ಅವರು ಸಂಚಾರಕ್ಕೆ ಹೊರಡುವಾಗಲೆ ಲಲಿತೆಯು ಮೂರು ತಿಂಗಳ ಗರ್ಭಿಣಿ.

ಶಿವಾನಂದರು ಜನರಿದಿರಲ್ಲಿ ತಾನು ಅರ್ಧಲಕ್ಷ ಹಣ ಸಂಗ್ರಹಿಸಿಕೊಂಡು ಬರುತ್ತೇನೆಂದು ಎದೆತಟ್ಟಿ ಹೇಳುತ್ತಿದ್ದರೂ, ಕಡಿಮೆಯೆಂದರೆ ಇಪ್ಪತ್ತು ಮೂವತ್ತು ಸಾವಿರ ರೂಪಾಯಿಯನ್ನಾದರೂ ಸಂಪಾದಿಸಿ ತನ್ನ ಸಾಲವನ್ನೆಲ್ಲಾ ತೀರಿಸಿ ಮೈತೊಳೆದು ಸುಖವಾಗಿರಬಹುದೆಂದು ನೆನಸಿದ್ದರು. ಇನ್ನೆಲ್ಲಿಯಲ್ಲದಿದ್ದರೂ ಬೊಂಬಾಯಿ ಪಟ್ಟಣವೊಂದರಲ್ಲೇ ಹತ್ತಿಪ್ಪತ್ತು ಸಾವಿರ ರೂಪಾಯಿ ಸಂಗ್ರಹಿಸಬಹುದೆಂದು ಅವರಿಗೆ ಖಚಿತವಿತ್ತು. ಆದರೆ ಇದೆಲ್ಲಾ ಬಯಲಾಶೆಯಾಗಿ ಹೋಯಿತು. ಕೆಲವೆಡೆ ಅವರ ವೆಚ್ಚಕ್ಕೇನೇ ತಂತಿಕೊಟ್ಟು ಊರಿಂದ ಹಣತರಿಸಿಕೊಳ್ಳಬೇಕಾಯಿತು. ಎಲ್ಲಿ ಹೋದರೂ ನಿರಾಶೆಯೇ ಅವರನ್ನೆದುರುಗೊಳ್ಳ ನಿಂತಿತ್ತು. ಅವರ ಉತ್ಸಾಹ ಕುಂದಿಹೋಯಿತು. ದಿನೇ ದಿನೇ ಚಿಂತೆಯು ಅಧಿಕವಾಗಿ ಅವರ ದೃಢಕಾಯವನ್ನು ಒಳಗಿಂದೊಳಗೆ ಕೊರೆದು ಕುಗ್ಗಿಸಿಬಿಟ್ಟಿತು. ಮಾನವನು ಉತ್ಸಾಹ ಕುಂದಿದನೆಂದರೆ ಮತ್ತವನ ಕೈಯಿಂದೇನೂ ಸಾಗದು. ಎಂತಹ ವಿಪತ್ತಿನಿಂದಾದರೂ ಉತ್ಸಾಹ ಮತ್ತು

ಸಾಹಸದಿಂದ ಪಾರಾಗಬಹುದು. ಉತ್ಸಾಹವೆಂಬುದು ಶರೀರದ ನರನಾಡಿಗಳೆಂಬ ತಂತಿಗಳ ವಿದ್ಯುಚ್ಛಕ್ತಿ. ಆ ಶಕ್ತಿಯೊಂದಿದ್ದರೆ ಎಂತಹ ವಿಸ್ಮಯಕರ ಕೆಲಸವನ್ನಾದರೂ ಮಾಡಬಹುದು. ಅದಿಲ್ಲದಿದ್ದರೆ ಮಾನವ ಶರೀರವೆಂಬದು ಬರೀ ಒಂದು ಕೊರಡು. ಶಿವಾನಂದರು ನಿರುತ್ಸಾಹಗೊಂಡು ತಾನು ಯಾವಾಗ ಹಿಂದಿರುಗಲಿಲ್ಲೆಂಬ ಒಂದೇ ಚಿಂತೆಯಲ್ಲಿದ್ದರು. ಆಗಲೇ ಬೊಂಬಾಯಿಯಲ್ಲಿ ಹಿಂದು ಮುಸಲ್ಮಾನ ಹೊಡೆದಾಟ ನಡೆಧಿದೆಯೆಂದು ಯಾರೋ ಅವರಿಗೆ ತಿಳಿಸಿದರು. ಎಲ್ಲಿಯೋ ಒಂದು ಗಲ್ಲಿಯ ಮೂಲೆಯಲ್ಲಿ ಕೆಲಮಂದಿ ಹಿಂದು ಮುಸಲ್ಮಾನರು ಹೊಡಕೊಂಡುದರ ಗೋಷ್ಟಿಯು ಬೊಂಬಾಯಿಯವರಿಗೇನೇ ಇರದಿದ್ದರೂ ಹೊರಗೆ ಅದು ಬಹಳ ದೊಡ್ಡ ಗಲಭೆಯಾಗಿ ಆ ಸುದ್ದಿಯು ಎಲ್ಲೆಲ್ಲಿಯೂ ಹಬ್ಬಿಬಿಟ್ಟಿತು. ಶಿವಾನಂದರು ಇದೇ ಸುಸಂದರ್ಭವೆಂದು ತನ್ನ ಬೊಂಬಾಯಿಯ ಸಂಚಾರವನ್ನು ನಿಲ್ಲಿಸಿ ಕೂಡಲೆ ಹಿಂದಿರುಗಿದರು. ನರಸಿಂಹನಿಗೊಮ್ಮೆ ಬೊಂಬಾಯಿ ನೋಡಬೇಕೆಂದು ಬಹಳ ಮನಸ್ಸಿತ್ತು. ಅವನು ಶಿವಾನಂದರೊಡನೆ "ಇಷ್ಟರವರೆಗೆ ಖರ್ಚೇ ಹೊರತು ಹುಟ್ಟೇನೂ ಇಲ್ಲ. ನಮಗೆ ಸಂಪಾದನೆಯಾಗುವ ಸ್ಥಳವೆಂದರೆ ಬೊಂಬಾಯಿ. ಅಲ್ಲಿಗೆನೇ ಹೋಗದೆ ಹಿಂತಿರುಗಿದರೆ ಸಾಲಗಾರರಿಗೇನು ಮಾಡುವುದು ಪರಾಕೆ?"ಎಂದು ಬಹಳವಾಗಿ ಹೇಳಿಕೊಂಡ. ಆದರೂ ಶಿವಾನಂದರು ಕಿವಿಕೊಡಲಿಲ್ಲ. ಅವರಿಗೆ ಬೇಸರ ಹಿಡಿದುಹೋಗಿತ್ತು. ಹೇಗಾದರೂ ಒಮ್ಮೆ ಊರಿಗೆ ಹೋಗಿ ಬಿದ್ದರೆ ಸಾಕೆನಿಸುತ್ತಿತ್ತು. "ಸಾಲಗಾರರಿದ್ದಾರೆಂದು ಪ್ರಾಣಕಳಕೊಳ್ಳಲಾಗುವುದೇ ನರಸಿಂಹ? ಇನ್ನೊಮ್ಮೆ ನೋಡುವ" ಎಂದರವರು. "ಹೌದು, ಇನ್ನೊಮ್ಮೆ! ಯಾರು ಸಾಯುತ್ತಾರೋ ಯಾರು ಬದುಕುತ್ತಾರೋ ಆಗ?" ಎಂದ ನರಸಿಂಹ ತಲೆತುರಿಸಿಕೊಳ್ಳುತ್ತಾ ಬಹಳ ಖಿನ್ನನಾಗಿ. "ನಿನಗೇನೂ ಮಾರಿಬರಲಿಕ್ಕಿಲ್ಲ ಇನ್ನೊಂದು ಇಪ್ಪತ್ತು ವರ್ಷ. ಕಲ್ಲುಗುಂಡಿನ ಹಾಗಿದ್ದಿ. ದಿನ ಹೋದಂತೆ ಯೌವನ ತುಂಬಿ ಬರುತ್ತದೆ ನಿನಗೆ! ನಾನು ಬಾಲಕನಾಗಿದ್ದಾಗಲೂ ಹೀಗೇ ಇದ್ದಿ!" ಎಂದರು ಸ್ವಾಮಿರು ಕಳೆಗುಂದಿದ ಮುಖದಲ್ಲಿ ಮುಗುಳ್ನಗೆಯನ್ನೊಮ್ಮೆ ಬೆಳಗಿಸಿ. "ಆಯ್ತಪ್ಪಾ, ನಮ್ಮ ಮಾತು ಯಾರು ಕೇಳುತ್ತಾರೆ ಬಡವರದು!" ಎಂದು ಭಗ್ನಮನೋರಥವಾಗಿ ಉದ್ಗರಿಸಿ ನರಸಿಂಹನು ಶಿವಾನಂದರ ಬಳಿಯಿಂದ ಹೊರಟುಹೋದ.

ಹಿಂದು ಮುಸಲ್ಮಾನ ಗಲಾಟೆಯ ನಿಮಿತ್ತ ಶಿವಾನಂದರು ಬೊಂಬಾಯಿಗೆ ಹೋಗದೇನೇ ಹಿಂತಿರುಗಿದ್ದಾರೆ; ಐವತ್ತು ಸಾವಿರ ಬಿಟ್ಟು ಐದು ಸಾವಿರ ರೂಪಾಯಿಯನ್ನೂ ಸಂಗ್ರಹಿಸದೆ ಮತ್ತಷ್ಟು ವೆಚ್ಚವನ್ನೇ ಮಾಡಿ ಬರಿಗೈಯಿಂದ ಹಿಂದಿರುಗಿದ್ದಾರೆಂಬುದು ಅವರ ಸಾಲಿಗರಿಗೆಲ್ಲಾ ಮೊದಲೇ ತಿಳಿದು ಅವರು ತಮ್ಮ ಹಣಕ್ಕೆ ಗತಿಯೇನೆಂದು ಕಳವಳಿಸಹತ್ತಿದ್ದರು. ಈ ಕೆಲವೇ ಮಂದಿ ಸಾಲಿಗರನ್ನು ಬರಿಗೈಯಿಂದ ಇದಿರಿಸುವುದಕ್ಕಿಂತಲೂ ದೊಡ್ಡ ಸಮಸ್ಯೆಯೊಂದು ಶಿವಾನಂದರು ಶಿವಪುರಕ್ಕೆ ಮುಟ್ಟಿದೊಡನೆಯೇ ಅವರನ್ನು ಕಂಗೆಡಿಸಿಬಿಟ್ಟಿತು. ಅದನ್ನು ನಿವಾರಿಸುವ ಉಪಾಯಗಾಣದೆ ಅವರು ತಳಮಳಿಸುತ್ತಿದ್ದರು. ಎಂತಹ ಮುಗ್ಗಟ್ಟಿನಲ್ಲಾದರೂ ಧೃತಿಗೆಡದೆ ಅವರ ಸಹಾಯಕ್ಕೆ ಬರುತ್ತಿದ್ದ ನರಸಿಂಹನೂ ಈ ಸಂದರ್ಭದಲ್ಲಿ ಏನು ಮಾಡುವುದೆಂದು ತೋಚದೆ ಕುಗ್ಗಿ ತಣ್ಣಗಿದ್ದನು. ಶಿವಪುರಕ್ಕೆ ಹಿಂತಿರುಗಿದಂದಿನಿಂದ ಶಿವಾನಂದರಿಗೆ ಅದೊಂದೇ ಚಿಂತೆ. ಆಹಾರ ನಿದ್ದೆಗಳ ಗೊಡವೆ ಕೂಡಾ ಅವರಿಗಿದ್ದಿಲ್ಲ. ಅವರು ಬೈಠಕು ಕೋಣೆಯಲ್ಲಿ ಬಾಗಿಲು ಹಾಕಿ ಕುಳಿತು ಇಡೀ ದಿವಸ ಅದೊಂದೇ ಚಿಂತಾಮಗ್ನರಾಗಿದ್ದರು. ದೇವಸ್ಥಾನದ ಪೂಜೆಯಾದರೋ ಪಾರುಪತ್ಯಗಾರರು ಹೇಳಿ ಹೇಳಿ ಬೆಳಗ್ಗಿನದು ಸಂಜೆ, ಸಂಜೆದ್ದು ಮಧ್ಯ ರಾತ್ರಿಗೆ ಹೇಗಾದರೂ ಆಗುತ್ತಿತ್ತು. ಸಂಗತಿಯೇನೆಂದು ಶಿವಾನಂದರು ಬಾಯ್ಬಿಟ್ಟು ಪಾರುಪತ್ಯಗಾರರಿಗಾಗಲಿ ಇನ್ನಾರಿಗಾಗಲಿ ಹೇಳಲಾರರು. ಅವರು ಕೇಳಿ ಕೇಳಿ ಬೇಸತ್ತು ಕಡೆಗೆ ಸುಮ್ಮನಿದ್ದುಬಿಟ್ಟರು. ಕಡೆಗೆ ಒಂದು ರಾತ್ರಿ ಶಿವಾನಂದರು ನರಸಿಂಹನನ್ನು ಕೋಣೆಗೆ ಕರೆಸಿದರು. ಅವರೊಳಗೆ ಬಹಳ ಹೊತ್ತು ಮಾತುಕತೆ ನಡೆಯಿತು.

ಶಿವಾನಂದ—ಹೀಗೆಯೇ ಆದರೆ ನಾನಿನ್ನು ಹೆಚ್ಚು ಸಮಯ ಬದುಕುವ ಹಾಗಿಲ್ಲ ನರಸಿಂಹ. ಈಗಲೆ ನನಗೆ ಕೂತಲ್ಲಿಂದ ಏಳಲಾಗುವುದಿಲ್ಲ. ತಲೆ ಗಿರ್ರನೆ ತಿರುಗುವುದು. ಕೈಕಾಲು ಕಂಪಿಸುವುದು. ಇಲ್ಲಿಗೆ ಬಂದು ಈ ಅವಸ್ಥೆಗೊಳಗಾಗುವುದಕ್ಕಿಂತ ಬೊಂಬಾಯಿಗೆ ಹೋಗಿಯಾದರೂ ಸಾಯುವುದೊಳ್ಳೇದಿತ್ತು.

ನರಸಿಂಹ—ಯಾರಿಗೆ ಗೊತ್ತು ಬುದ್ಧಿ ಈ ಸಂಗತಿ! ನಾವು ಹೋಗುವಾಗಲೇ ಮೂರು ನಾಲ್ಕು ತಿಂಗಳ ಗರ್ಭಿಣಿಯಂತೆ. ಆ ನಾಗಿ ರಂಡೆ

ನೆಮಗಾವುದನ್ನೂ ತಿಳಿಸಲೇ ಇಲ್ಲ. ಮೊದಲಾದರೆ ಏನಾದರೂ ಮಾಡ ಬಹುದಿತ್ತು. ಈಗೇನು ಮಾಡುವುದು ಪರಾಕೆ ಮಗು ಹುಟ್ಟಿ ಐದಾರು ತಿಂಗಳಾದ ಮೇಲೆ?

ಶಿವಾನಂದ—ನೀನೇನಾದರೂ ಮಾಡದಿದ್ದರೆ ನನಗೆ ಪ್ರಾಣವಿಟ್ಟು ಕೊಂಡಿರಲು ಸಾಧ್ಯವಿಲ್ಲ ನರಸಿಂಹ! ಈ ಅವಸ್ಥೆಗಿಂತ ವಿಷತಿಂದು ಆತ್ಮಹತ್ಯೆ ಮಾಡಿಕೊಳ್ಳುವುದೇ ಲೇಸು. ನನ್ನ ಪ್ರತಿಮೂರ್ತಿಯಂತೆ ಆ ಮಗು!

ನರಸಿಂಹ—ಅದೇ ಸುದ್ದಿ ಊರಲ್ಲೆಲ್ಲಾ ಎಲ್ಲಿ ಹೋದರೂ! ಆ ಮಗುವನ್ನು ನೋಡಿ ನಿಮ್ಮನ್ನು ನೋಡಬೇಕಾಗಿಲ್ಲ. ಪ್ರತ್ಯಕ್ಷ ನೀವೇ. ನಾಗಿಯ ಸಂತೋಷವೇ ಸಂತೋಷ!

ಶಿವಾನಂದ—ಏನು ಮಾಡುವುದು ನರಸಿಂಹ! ಈ ಸುಟ್ಟ ಸನ್ಯಾಸವಲ್ಲ ದಿದ್ದರೆ ಮದುವೆಯಾಗಿ ಮಡದಿ ಮಕ್ಕಳ ಸುಖ ಪಡೆದು ಆನಂದದಿಂದಿರ ಬಹುದಿತ್ತು. ಒಮ್ಮೊಮ್ಮೆ ಆ ಮಗುವನ್ನೊಂದು ಸಲ ಕಾಣಬೇಕೆಂದೂ ನನ ಗೆಷ್ಟೊ ಆಶೆಯಾಗುವುದು. ಈ ಸನ್ಯಾಸಿ ಪಟ್ಟಕ್ಕೇನೇ ತಿಲಾಂಜಲಿಯಿತ್ತು ಲಲಿತೆಯೊಡನೆ ಸುಖವಾಗಿ ಸಂಸಾರ ನಡೆಸಿದರೇನೆಂದು ಯೋಚಿಸಿದುದೂ ಇದೆ ನರಸಿಂಹ!

ನರಸಿಂಹ—ಅದು ಸಹಜವಲ್ಲವೇ? ಎಷ್ಟಾದರೂ ತಮ್ಮ ವೀರ್ಯಕ್ಕೇನೇ ಹುಟ್ಟಿದ ಮಗುವಲ್ಲವೇ ಪರಾಕೆ? ಸ್ವಾಭಾವಿಕವಾದ ಆ ಮೋಹವಾದರೂ ಎಲ್ಲಿ ಹೋದೀತು? ಆದರೆ ನೀವು ಸನ್ಯಾಸಿಯಾಗಿ....

ಶಿವಾನಂದ—ಹುಂ, ನಾನೆಂತಹ ಸನ್ಯಾಸಿಯೆಂಬುದನ್ನು ನಿನ್ನಷ್ಟು ಚೆನ್ನಾಗಿ ಬಲ್ಲವರು ಇನ್ನಾರೂ ಇರಲಾರರು ನರಸಿಂಹ. ಆದರೇನು ಮಾಡಲಿ! ಸಮಾಜಕ್ಕಾಗಿ ನಾನೀ ಸೋಗನ್ನು ಹಾಕಿಕೊಳ್ಳಬೇಕಾಗಿದೆ. ನನ್ನೀ ಕಾಷಾಯ ವಸ್ತ್ರದೊಳಗಿನ ವೇಷವು ಎಂತಹದಿದ್ದರೂ ಅದರ ಗೊಡವೆ ಸಮಾಜಕ್ಕಿಲ್ಲ. ಅದು ಕಾಷಾಯ ವಸ್ತ್ರವನ್ನಷ್ಟೆ ಮಾನಿಸುವುದು. ಆದಕ್ಕೆ ಬೇಕಾದುದು ಹೊರಗಣ ಆಡಂಬರವಲ್ಲದೆ ಒಳಗಣ ಹೃದಯವಲ್ಲ. ಒಳಗಣ ಹೃದಯವೆಂತಹದೆಂಬುದರ ಗೊಡವೆಯು ಒಂದಿಷ್ಟಾದರೂ ಸಮಾಜಕ್ಕಿರುತ್ತಿದ್ದರೆ ಈ ಬಾಲಾಶ್ರಮದ ವಿಪರ್ಯಾಸವು ಎಂದೋ ಮಣ್ಣು ಗೂಡುತ್ತಿತ್ತು.

ನರಸಿಂಹ—ಇದೇನು ಪರಾಕೆ, ಈ ರೀತಿ ಮಾತಾಡುತ್ತಿದ್ದೀರಿ?

ಶಿವಾನಂದ—ನನಗೂ ಮಾನವ ಸಹಜ ಹೃದಯವಿದೆ; ನನ್ನಲ್ಲೂ ವಿವೇಕವಿದೆ ನರಸಿಂಹ. ಆದರೇನುಮಾಡಲಿ! ..........ಎನ್ನುತ್ತೆನ್ನುತ್ತ.

ಆವೇಗದಿಂದ ಗದ್ಗದ ಕಂಠರಾಗಿ ತುಸು ಹೊತ್ತು ಸುಮ್ಮನಿದ್ದು ಆ ಮೇಲೆ ದೀರ್ಘ ಶ್ವಾಸಬಿಟ್ಟು ಸ್ವಾಮಿಗಳು ಮುಂದರಿಸಿದರು.

ಆದರೇನುಮಾಡಲಿ! ಪರಂಪರಾಗತವಾಗಿ ಬಂದಿರುವ, ಕೊಳತು ನಾರುವ ರೂಢಿಯ ಶವವನ್ನು ಮಹಾ ಪ್ರಸಾದವೆಂದು, ಅಮೂಲ್ಯ ಸೊತ್ತೆಂದು ಹೊತ್ತು ತಿರುಗಬೇಕಾಗಿದೆ. ನನಗೆ ಬೇಡವಾಗಿತ್ತು ನರಸಿಂಹ ಈ ಸನ್ಯಾಸಿ ಪಟ್ಟ. ನಾನು ಬೇಡ ಬೇಡವೆಂದು ಎಷ್ಟೊಂದು ಕೂಗಿದರೂ ಕೇಳದೆ ಬಲವಂತದಿಂದ ತಲೆ ಬೋಳುಮಾಡಿ ಕಾಷಾಯ ವಸ್ತ್ರ ಉಡಿಸಿ ನನ್ನನ್ನು ಸನ್ಯಾಸಿಯನ್ನಾಗಿ, ಧರ್ಮ ಗುರುವನ್ನಾಗಿ ಮಾಡಿದರು. ಜೀವನದ ಸಹಜ ದಾರಿಯು ತಡೆಗಟ್ಟಲ್ಪಟ್ಟಾಗ ಸ್ವಾಭಾವಿಕ ಪ್ರವೃತ್ತಿಯು ದಡಮೀರಿ ಹರಿದು ಹಾವಳಿಮಾಡಿತು. ಇನ್ನೇನು ಮಾಡಲಿ ನರಸಿಂಹ? ಇನ್ನೇನು ಮಾಡಲಿ? ನನ್ನನ್ನು ನನ್ನಷ್ಟಕ್ಕೇನೇ ಬಿಡುತ್ತಿದ್ದರೆ ನನ್ನ ಜೀವನದ ಗತಿಯೇ ಬೇರೆಯಿತ್ತು. ಈಗಲಾದರೂ ಸ್ವಾಭಾವಿಕ ಇಚ್ಛೆಯಂತೆ ನಾನು ನಡೆಯುವಂತಾಗುವುದಾದರೆ ನನ್ನ ಲಲಿತೆಯನ್ನು, ನಾನು ಅತ್ಯಾಚಾರಮಾಡಿ ಮಾನಗೆಡಿಸಿದ ಆ ನಿರ್ದೋಷಿ ಬಾಲೆಯನ್ನು ಮದುವೆಯಾಗಿ....

ನರಸಿಂಹ—ಛೆ! ಛೆ!! ಏನಿದು ಪರಾಕೆ? ಏನು ಹೇಳುತ್ತಿರುವಿರಿ! ನಿಮ್ಮ ಬುದ್ಧಿಯೇ ನಿಮ್ಮ ಸ್ವಾಧೀನವಿಲ್ಲದಂತಾಗಿದೆ ಈಗೀಗ ವಿಪರೀತ ಚಿಂತೆಯಿಂದ!

ಶಿವಾನಂದ—ಸಂಪೂರ್ಣ ವಿವೇಕದಿಂದಲೇ ನಾನೀ ಮಾತುಗಳನ್ನಾಡುವುದು ನರಸಿಂಹ. ನೀನೇನೂ ಗಾಬರಿಪಡಬೇಡ. ನನ್ನ ಹೃದಯವನ್ನೊಮ್ಮೆ ನಿನ್ನ ಮುಂದೆ ಬಿಚ್ಚಿಟ್ಟುದು. ಅದು ಕೂಡಾ ಕೇವಲ ನನ್ನ ಸಮಾಧಾನಕ್ಕಾಗಿ. ನನ್ನ ಅಂತರಂಗದ ಬೇಗೆಯನ್ನು ಒಂದಿಷ್ಟು ತಣಿಸುವುದಕ್ಕಾಗಿ. ನಿನ್ನೊಡನೆ ನಾನು ಏನು ಹೇಳಿದರೇನು? ನಮ್ಮ ಮಠದ ಆಚಾರ್ಯರೊಡನೆ ಶಿವಜ್ಞಾನ ಸಮಾಜದ ಸಮ್ಮುಖದಲ್ಲಿ, ಹಿಂದೂ ಸಮಾಜದ ಮುಂದೆ ಇದೇನನ್ನೂ ಹೇಳದೆ ದೊಡ್ಡ ನಟನೆ ನಡೆಸಿದರಾಯಿತು. ಮತ್ತೇನು? ನೀನೇನೂ ಬೆದರಬೇಕಾಗಿಲ್ಲ ನರಸಿಂಹ. ನಾನಿನ್ನು ಹೊಸ ಜೀವನವನ್ನೇನೂ

ಆರಂಭಿಸುವ ಹಾಗಿಲ್ಲ. ಸಮಾಜಕ್ಕೆ ಈ ನಟನೆಯ ಜೀವನವೇ ಬೇಕಾಗಿರುವಾಗ, ಅದನ್ನದು ಸನ್ಮಾನಿಸುತ್ತಿರುವಾಗ, ನಾನೂ ಅದರಲ್ಲಿ ಇಷ್ಟೊಂದು ಮುಂದುವರಿದಿರುವಾಗ ಈಗ ಈ ಅಸ್ವಾಭಾವಿಕ ಜೀವನದ ಮುಸುಕನ್ನು ಹರಿದೊಗೆದು ಈ ಉಚ್ಚಸ್ಥಾನ ಮಾನವನ್ನೆಲ್ಲಾ ತೃಣೀಕರಿಸಿ, ಸಮಾಜದ ದೃಷ್ಟಿಯಲ್ಲಿ ಎಷ್ಟೊಂದು ತುಚ್ಛವಾದರೂ ಸ್ವಾಭಾವಿಕ ಜೀವನವನ್ನು ನಡೆಸುವ ಸಾಹಸಕ್ಕೆ ಕೈಯಿಕ್ಕುವಷ್ಟರ ನೈತಿಕ ಬಲವಾದರೂ ನನ್ನಲ್ಲಿಲ್ಲ ನರಸಿಂಹ. ಸಮಾಜಕ್ಕೆ ಬೇಕಾಗುವ ವರೆಗೆ ನಾನೀ ಕಣ್ಣುಕಟ್ಟಿನ ಜೀವನವನ್ನೇ ಸಾಗಿಸುವೆನು. ಅದಕ್ಕೆ ಅದೇ ಬೇಕಾಗಿರುವಾಗ ನನಗೇನು?

ನರಸಿಂಹ—ಅದೆಲ್ಲಾ ಹಾಗಿರಲಿ ಪರಾಕೆ; ನನ್ನನ್ನೀ ಅಪರ ರಾತ್ರಿಯಲ್ಲಿ ಕರೆಸಿದುದೇಕೆ?

ಶಿವಾನಂದ—ನನಗೆ ನಿದ್ದೆಬರುವುದಿಲ್ಲೆಂದು ಮಾತಾಡುತ್ತಾ ಕುಳಿತುಕೊಳ್ಳಲಿಕ್ಕೆ.

ನರಸಿಂಹ—ಇನ್ನು ನಾನು ಹೋಗಲೆ?

ಶಿವಾನಂದ—ಎಲ್ಲಿಗೆ? ನನಗಿನ್ನೂ ಮಾತಾಡಲಿದೆ?

ನರಸಿಂಹ—ಏನು ಪರಾಕೆ? ಇದೇ ಮಾತಲ್ಲವೇ?

ಶಿವಾನಂದ—ಅಲ್ಲ........ಅಲ್ಲ! ಇದೇ ಮಾತಲ್ಲ.........

ನರಸಿಂಹ—ಏನು ಏನು ಪರಾಕೆ? ನಿಮ್ಮ ಮನಸ್ಸಿನಲ್ಲಿದ್ದುದನ್ನು ಸ್ಪಷ್ಟವಾಗಿ ಹೇಳಬಾರದೆ ನಿಮ್ಮಾ ಸೇವಕನೊಡನೆ?

ಶಿವಾನಂದ—ನಾನು ಹೇಳಿದರೆ ನೀನು ಆ ಪ್ರಕಾರ ಮಾಡುವೆಯಾ?

ನರಸಿಂಹ—ಅದಕ್ಕೇನಡ್ಡಿ ಪರಾಕೆ? ನಾನು ಇಷ್ಟರವರೆಗೆ ನಿಮ್ಮ ಮಾತಿನಂತೆ ನಡೆಯದುದಿದೆಯೇ? ನಿಮಗಾಗಿ ನಾನು ಏನು ಮಾಡುವುದಕ್ಕೂ ಸಿದ್ಧನಿರುವೆನು. ನಿಮಗೆ ಸುಖವಾಗುವುದಾದರೆ ಪ್ರಾಣಕೊಡಲೂ ಸಿದ್ಧನೇ ಸರಿ.

ಶಿವಾನಂದ—ಮತ್ತೆ ಹಿಂದೆಗೆಯಲಾರೆಯಲ್ಲ?

ನರಸಿಂಹ—ಛೆ! ಎಷ್ಟಕ್ಕೂ ಇಲ್ಲ ಪರಾಕೆ. ನಿಮಗೆ ಆ ಸಂದೇಹವೇ ಬೇಡ.

ಶಿವಾನಂದ—ಹಾಗಾದರೆ ಮನಬಿಚ್ಚಿ ಹೇಳಲೆ?

ನರಸಿಂಹ—ಅಡ್ಡಿಯಿಲ್ಲದೆ ಹೇಳಿ ಪರಾಕೆ.

ಶಿವಾನಂದ—ನನ್ನ ಪ್ರತಿರೂಪವೊಂದು ಈ ಶಿವಪುರದ ಜನರೆಲ್ಲರ ಕಣ್ಣೆದುರಲ್ಲಿಯೇ ಬೆಳೆಯುತ್ತಿರುವಾಗ ನಾನು ಸನ್ಯಾಸಿಯಾಗಿರುವುದಾದರೂ ಹೇಗೆ ನರಸಿಂಹ? ಪ್ರತ್ಯಕ್ಷವಾದ ರುಜುವಾತು ಮುಂದಿರುವಾಗ ಸೋಗು ಹಾಕಿಕೊಳ್ಳುವುದಾದರೂ ಹೇಗೆ? ಒಂದೋ ನಾನು ನನ್ನೀ ಸೋಗನ್ನೇ ತೆಗೆದು ಹಾಕಿ ಶಿವಪುರವನ್ನೇ ಬಿಟ್ಟು ಎಲ್ಲಿಗಾದರೂ ಹೋಗಿಬಿಡಬೇಕು. ಇಲ್ಲವಾದರೆ........

ನರಸಿಂಹ—ಇಲ್ಲವಾದರೇನು ಪರಾಕೆ?

ಶಿವಾನಂದ—ಇಲ್ಲವಾದರೆ ನನ್ನೀ ಸೋಗನ್ನು ಅಲ್ಲಗಳೆಯುವ ಆ ಪ್ರತ್ಯಕ್ಷ ಸಿದ್ಧಾಂತವು ಇಲ್ಲದಂತಾಗಬೇಕು.

ನರಸಿಂಹ—ಅಂದರೆ?

ಶಿವಾನಂದ—ಅಂದರೇನೆಂದು ತಿಳಿಯದೆ ನರಸಿಂಹ? ಈ ನಟನೆಯೆಲ್ಲ ಯಾಕೆ?

ನರಸಿಂಹ—ನಿಜವಾಗಿಯೂ ನಟನೆಯಲ್ಲ ಪರಾಕೆ. ನಾನೇನು ಮಾಡಬೇಕೆಂದು ಸ್ಪಷ್ಟವಾಗಿ ಹೇಳಬಾರದೆ?

ಶಿವಾನಂದ—ಆಹ! ಇನ್ನೂ ಸ್ಪಷ್ಟವಾಗಿ ಹೇಳಬೇಕೆ ನರಸಿಂಹ?

ನಿಟ್ಟುಸಿರು ಬಿಟ್ಟು ಹೇಳಿದರು.

ನರಸಿಂಹ—ಯಾಕಿಷ್ಟು ಉದ್ವೇಗ ಬುದ್ಧಿ? ಸಂಗತಿಯೇನೆಂದು ಮನಬಿಚ್ಚಿ ಹೇಳಲಾಗದೇ?

ಶಿವಾನಂದ—ಏನು ಹೇಳುವುದು ನರಸಿಂಹ! ಆಗಲಿ ನನ್ನೀ ಮನಸ್ಸನ್ನು ಕಲ್ಲುಮಾಡಿ, ಒಂದಿಷ್ಟು ಮಾನವತ್ವವಿಲ್ಲದ ದಾನವನೇ ಆಗಿ ಹೇಳುವೆನು, ಸ್ಪಷ್ಟವಾಗಿ ಹೇಳುವೆನು. ನರಸಿಂಹ, ನೀನಾ ಮಗುವನ್ನು ಹೇಗಾದರೂ ಕೊಂದು ಹಾಕಬೇಕು.

ನರಸಿಂಹ—ಏನು, ಮಗುವನ್ನು ಕೊಲ್ಲುವುದೆ? ಪರಾಕೆ........ದಂಗು ಬಡೆದು ಅವಾಕ್ಕಾಗಿ ನಿಂತುಬಿಟ್ಟನು.

ಶಿವಾನಂದ—ಹೌದು. ನನಗಾಗಿಯಲ್ಲ, ಈ ಸನ್ಯಾಸಿ ಪಟ್ಟಕ್ಕಾಗಿ, ಅದರ ಸ್ಥಾನ ಮಾನಕ್ಕಾಗಿ ನೀನಾ ಪೈಶಾಚಿಕ ಕೃತ್ಯಮಾಡಲೇ ಬೇಕು.

ನರಸಿಂಹ—ಆಗದು, ಅದೊಂದು ಕೆಲಸ ನನ್ನಿಂದಾಗದು ಪರಾಕೆ! ನಾನಾ ಶಿಶು ಹತ್ಯಮಾಡಲಾರೆ! ಕ್ಷಮಿಸಬೇಕು ಬುದ್ಧಿ ಕ್ಷಮಿಸಬೇಕು! ಈ ಸಲ ನನ್ನನ್ನು ಮಾಫಿಬಿಡಬೇಕು.

ಶಿವಾನಂದ—ಅದಾಗದು. ಈ ಕೆಲಸ ನಿನ್ನಿಂದಲ್ಲದೆ ಮತ್ತಾರಿಂದಲೂ ಸಾಧ್ಯವೇ ಇಲ್ಲ. ನೀನೀಗ ಕೊಟ್ಟ ಮಾತಿಗೆ ತಪ್ಪಬಾರದು. ಪರಿಣಾಮ ನೆಟ್ಟಗಾಗಲಿಕ್ಕಿಲ್ಲ. ನಿನ್ನ ಪ್ರಾಣಕ್ಕೆನೇ ಸಂಚಕಾರ ಬಂದೀತು!

ನರಸಿಂಹ—ಅಯ್ಯೋ ಪರಾಕೆ! ನಾನೇನು ಮಾಡಲಿ! ಆ ಕೂಸನ್ನು ಹೇಗೆ ಕೊಲ್ಲಲಿ!

ಶಿವಾನಂದ—ಆ ಉಪಾಯ ನಾನು ಹೇಳುವೆನು. ನಿನಗಾ ವಿಷಯ ದಲ್ಲಿ ಯಾವ ಭೀತಿಯೂ ಬೇಡ. ಎಲ್ಲದಕ್ಕೂ ಹೊಣೆಗಾರ ನಾನು. ನೀನು ಕೇವಲ ನನ್ನ ಕೈಯ ಉಪಕರಣ ಮಾತ್ರ. ನಿನಗದರಲ್ಲಿ ಯಾವ ಪಾಪವೂ ಇಲ್ಲ.

ನರಸಿಂಹ—ಆಗಲಿ ಪರಾಕೆ. ನೀವು ಹೇಳಿದಂತೆ ಮಾಡುವೆನು. ಮತ್ತೇನು ಮಾಡಲಿ!

ಎಂದು ಎಲ್ಲಾ ಪಾಪವನ್ನೂ ಸ್ವಾಮಿರ ತಲೆಯಮೇಲೆ ಹಾಕಿಬಿಡುವಂತೆ ನರಸಿಂಹನು ದೀರ್ಘ ಶ್ವಾಸಬಿಟ್ಟು ಗೊಂಬೆಯಂತೆ ನಿಂತುಬಿಟ್ಟನು. ಏನೇ ನೆಲ್ಲಾ ಮಾಡಬೇಕೆಂದು ಶಿವಾನಂದರು ಅತಿ ರಹಸ್ಯವಾಗಿ ಅವನಿಗೆ ತಿಳಿಸಿದರು.

ಮರುದಿನ ಸುಮಾರು ಒಂಭತ್ತು ಘಂಟೆ ರಾತ್ರಿಯಿರಬಹುದು. ಲಲಿತೆ ಯು ಮಗುವಿಗೆ ನಿದ್ದೆ ಬರಲೆಂದು ಜೋಗುಳ ಹಾಡುತ್ತಾ ತೂಗುತ್ತಿದ್ದಳು. ಆದರೆ ಮಗುವು ಅಳುತ್ತಿದ್ದಿತು. ಮಗುವೆಲ್ಲಿಯಾದರೂ ಅತ್ತರೆ ನಾಗಿಗೆ ಸಹಿಸಿ ಕೊಳ್ಳಲು ಸಾಧ್ಯವೇ ಆಗುತ್ತಿದ್ದಿಲ್ಲ. ಅವಳು ಅಡಿಗೆ ಮನೆಯಿಂದೋಡಿ ಬಂದು "ಯಾಕೆ ಲಲಿತ ಕೂಗಿಸುವುದು ಮಗುವನ್ನು? ಸ್ವಲ್ಪ ಮೊಲೆ ಕೊಡ ಬಾರದೆ?" ಎಂದು ಗದರಿಸಿದಳು. "ಮೊಲೆ ಕೊಟ್ಟು ಅರ್ಧ ಘಂಟೆಯಾಗಲಿಲ್ಲ; ನಿನ್ನ ಮಾತು ಕೇಳಿದರಾಯಿತು! ಲೇಡಿ ಡಾಕ್ಟರರು ಮೂರು ಘಂಟೆಗೊಮ್ಮೆ ಮೊಲೆಯಾಗಲಿ ಹಾಲಾಗಲಿ ಕೊಡಬೇಕೆಂದು ಹೇಳಿದ್ದಲ್ಲವೇ?" ಎಂದಳು ಲಲಿತೆ. "ನಿಮ್ಮ ಘಂಟೆಗಿಂಟೆಗೆ ಹೋದರೆ ಮಗುವನ್ನು ಕೊಲ್ಲಬೇಕಾದೀತು! ಈಗ ಕೊಡು ಮೊಲೆ. ಮೊಲೆ ಕೊಡದೆ ಅವ ಮಲಗಲಿಕ್ಕಿಲ್ಲ" ಎಂದು ನಾಗಿಯು ಮಗುವನ್ನೆತ್ತಿ ಮುದ್ದಾಡಿದಳು. ಒಂದು ಹತ್ತಿಪ್ಪತ್ತು ಸಲ ಚುಂಬಿಸಿದಳು "ಹೂಂ ಕೊಡು ಮೊಲೆ"ಎಂದು ಒತ್ತಾಯಮಾಡಿ ಮಗುವನ್ನು ಲಲಿತೆಯ ಕೈಯ ಮೇಲಿಟ್ಟಳು. "ಮೊಲೆಯಲ್ಲೇನಿದೆ? ಈಗ ಕೊಟ್ಟುದು"

ಎಂದು ಲಲಿತೆಯು ತುಸು ಸಿಟ್ಟಿನಿಂದ ಮಗುವನ್ನು ಆಚೆ ಈಚೆ ಎಳೆದು ಮೊಲೆ ಕೊಡಲಾರಂಭಿಸಿದಳು. ಅಷ್ಟರಲ್ಲಿ ರಸ್ತೆಯ ಬಾಗಿಲು ಬಡಿದು ಯಾರೋ ಕರೆದ ಶಬ್ದವಾಯಿತು. "ಯಾರದು? ಬಂದೆ" ಎಂದು ನಾಗಿಯು ಹೊರಹೋಗಿ ಬಾಗಿಲು ತೆರೆದು ನೋಡುವಾಗ ರಸ್ತೆಬದಿಯಲ್ಲಿ ಎರಡು ಕಾರುಗಳು ನಿಂತಿದ್ದುವು. ನರಸಿಂಹನು ನಾಗಿಯ ಮುಖ ಸಹ ನೋಡದೆ ಫಕ್ಕನೆ ಒಳನುಗ್ಗಿದನು. ನಾಗಿಯೂ ಅವನನ್ನೇ ಹಿಂಬಾಲಿಸಿ, "ಏನು ಸಮಾಚಾರ ನರಸಿಂಹ ಭಟ್ರೆ? ಎರಡು ಮೋಟರ್‌ಕಾರು ಯಾರದು?" ಎಂದು ಗಟ್ಟಿಯಾಗಿ ಪ್ರಶ್ನಿಸಿದಳು. "ಸ್ವಲ್ಪ ಮೆಲ್ಲಗೆ ಮಾತಾಡು. ಸ್ವಾಮಿರು ಬಂದಿದ್ದಾರೆ ಮಗು ನೋಡಲಿಕ್ಕೆ. ಎಲ್ಲಿದೆ ಮಗು? ಬೇಗ ಇಲ್ಲಿ ತಾ"ಎಂದ ನರಸಿಂಹ. ಇನ್ನೊಂದು ಕಾರಿನಲ್ಲಿ ಯಾರಿದ್ದಾರೆ?" ಎಂದು ಪುನಃ ಪ್ರಶ್ನಿಸಿದಳು ನಾಗಿ ಬಹಳ ಉಲ್ಲಾಸಗೊಂಡು. "ಅದೆಲ್ಲಾ ಯಾಕೆ ನಿನಗೀಗ? ಬೇಗ ಮಗುವನ್ನಿಲ್ಲಿ ತಾ. ಸ್ವಾಮಿರಿಗೆ ಅದನ್ನೊಮ್ಮೆ ನೋಡದೆ ನಿದ್ದೆ ಬರುವುದಿಲ್ಲವಂತೆ" ಎಂದು ನರಸಿಂಹನು ನಾಗಿಯನ್ನೊಮ್ಮೆ ದಿಟ್ಟಿಸಿ ನೋಡಿದ. ಕೂಡಲೆ ನಾಗಿಯು ಒಳಗೋಡಿದಳು. "ಲಲಿತ, ಲಲಿತ! ಸ್ವಾಮಿರು ಬಂದಿದ್ದಾರೆ ಮಗು ನೋಡಲಿಕ್ಕೆ, ಸ್ವಾಮಿರು ಬಂದಿದ್ದಾರೆ!" ಎಂದು ಲಲಿತೆಯ ಕೈಯಿಂದ ಮಗುವನ್ನು ಕಸಕೊಂಡು ಹೊರಗೋಡಿ ಬಂದು, "ನಾನೇ ತೋರಿಸುತ್ತೇನೆ ಸ್ವಾಮಿರಿಗೆ ಅವರ ಪ್ರತಿ ಮೂರ್ತಿಯನ್ನು." ಎಂದು ನರಸಿಂಹನನ್ನು ಲಕ್ಷ್ಯಿಸದೇನೇ ಹೊರಗೆ ಹೋಗುವುದರಲ್ಲಿದ್ದಳು. ಆಗ ನರಸಿಂಹನು ತಡೆದು, "ನೀವಾರೂ ಹೊರಗೆ ಬರಕೂಡದಂತೆ. ನಾನೇ ಗುಟ್ಟಿನಲ್ಲಿ ತೋರಿಸಿ ಒಳಗೆ ತರುತ್ತೇನೆ" ಎಂದು ಮಗುವನ್ನು ನಾಗಿಯ ಕೈಯಿಂದ ತೆಗೆದುಕೊಂಡು ಅದರ ಮೇಲೆ ತಾನು ಹೊದೆದುಕೊಂಡಿದ್ದ ವಸ್ತ್ರ ಹಾಕಿ ಹೊರ ನಡೆದು ಮಗುವನ್ನು ಮೋಟರ್ ಕಾರಿನಲ್ಲಿರಿಸಿ ಹಿಂದೆ ಧಾವಿಸಿ ಬಂದು, "ನಾಗಿ, ನಾಗಿ, ನಾವು ಮುಂದೆ ಹೋಗುತ್ತೇವೆ. ಮಗುವನ್ನು ನಮ್ಮೊಂದಿಗೆ ಕೊಂಡೊಯ್ಯುತ್ತೇವೆ. ನೀನೂ ಲಲಿತೆಯೂ ಇನ್ನೊಂದು ಕಾರಿನಲ್ಲಿ ಬನ್ನಿರಿ" ಎಂದು ಹೇಳಿ ಪುನಃ ಮೋಟರ್ ಕಾರಿನ ಕಡೆಗೋಡಿ ದಡಕ್ಕನೆ ಬಾಗಿಲು ತೆರೆದು ಒಳಗೆ ಕೂತು, "ಹೊಂ ಹೋಗುವ" ಎಂದನು. ಸ್ವಾಮಿರ ಸೆಲೂನ್ ಕಾರು ಕೂಡಲೇ ಅದೆಲ್ಲಿಗೋ ಓಡಿಹೋಯಿತು. ನಾಗಿಯು ನರಸಿಂಹನ ಚಲನವಲನವನ್ನು ಕಂಡು

ವಿಸ್ಮಿತಳಾಗಿ ತುಸು ಹೊತ್ತು ನಿಂತಲ್ಲಿಯೇ ನಿಂತುಬಿಟ್ಟಳು. ಅವಳು ನೋಡು ತ್ತಿರುವಂತೆಯೇ ಸ್ವಾಮಿರ ಮೋಟರು ಧಾವಿಸಿತು. ಅವಳು ಕೂಡಲೆ ಒಳಗೋಡಿ, "ಲಲಿತ, ಲಲಿತ! ನಾವು ಮಠಕ್ಕೆ ಹೋಗಬೇಕಂತೆ, ಸ್ವಾಮಿರು ಹೇಳಿದರು. ನಮಗಾಗಿ ಇನ್ನೊಂದು ಕಾರು ಕಾದು ನಿಂತಿದೆ. ನಡೆ ಬೇಗ ಸೀರೆ ಉಡು, ಹೋಗುವ" ಎಂದಳು. ಮತ್ತು ತಾನು ಅವಸರವಸರದಿಂದ ಸೀರೆ ಉಡುವ ಸನ್ನಾಹಮಾಡಿದಳು. ಆಗ ಲಲಿತೆಯು, "ಅಮ್ಮಾ! ಅಮ್ಮಾ!! ಮಗುವೆಲ್ಲಿ? ಮಗುವೆಲ್ಲಿ?" ಎಂದು ಕೂಗಿಬಿಟ್ಟಳು. ಮಗುವನ್ನು ಕಾಣದೆ ತಲ್ಲಣಿಸುವ ಮಾತೃಹೃದಯದ ಕೂಗದು. ನಾಗಿಯ ಹೃದಯವನ್ನು ಭೇದಿಸಿ ಬಿಟ್ಟಿತು. ಅವಳು, "ಮಗುವನ್ನು ಸ್ವಾಮಿರುಮಠಕ್ಕೆ ಕೊಂಡೊ ಯ್ದರು ಮಗು, ಗಾಬರಿಪಡಬೇಡ. ನಾವೀಗಲೇ ಮಠಕ್ಕೆಹೋಗುವ" ಎಂದಳು. "ಮಗುವನ್ನೇಕವರು ಮಠಕ್ಕೊಯ್ಯುವರಮ್ಮಾ? ಅದು ಸುಳ್ಳು. ಅಮ್ಮಾ, ಮಗುವೆಲ್ಲಿದೆಯೆಂದು ಹೇಳಲಾರೆಯಾ? ಯಾರು ಕೊಂಡೊಯ್ದರು? ಯಾರಿಗೆ ಕೊಟ್ಟೆ ನೀನು? ಸ್ವಾಮಿರಿಗೆ ಬೇಕಾಗಿದ್ದರೆ ನಾವೇ ಕೊಂಡು ಹೋಗಬಾರದಿತ್ತೇ? ಅಮ್ಮಾ ಅದೆಲ್ಲಿರುವುದೋ? ಎಷ್ಟು ಕೂಗು ವುದೋ? ಸೀರೆ ಶೃಂಗಾರಕ್ಕೆ ಬೆಂಕಿಹಾಕಲಿ! ನಡೆ, ಅಮ್ಮಾ ಹೋಗುವ. ನಾನು ನನ್ನ ಮಗುವನ್ನು ಒಂದು ಕ್ಷಣವೂ ಬಿಟ್ಟು ಇರಲಾರೆ. ಹೃದಯದ ಉದ್ವೇಗವನ್ನು ತಾಳಲಾರೆನಮ್ಮಾ. ನನ್ನ ಪ್ರಾಣವೇ ಹಾರಿ ಹೋಗುವಂತಾ ಗುವುದು. ಹೋಗುವ ಅಮ್ಮಾ ಬೇಗ ಹೋಗುವ" ಎಂದು ನಾಗಿಯು ಹೊರಡುವ ವರೆಗೆ ಕಾಯದೆ ತಾನು ಹೊರಗೆ ಸರಿದಳು. ನಾಗಿಯೂ ಅವಳನ್ನು ಹಿಂಬಾಲಿಸಿದಳು. ಇಬ್ಬರೂ ಮೋಟರ್ ಕಾರುಹತ್ತಿ ಕುಳಿತುಕೊಂಡರು. ಡ್ರ್ಯಾವರನು ಅವರನ್ನು ಮಠಕ್ಕೆ ಕೊಂಡೊಯ್ದನು.

---

# ೮ನೇ ಅಧ್ಯಾಯ

## "ಮಗುವನ್ನೇನು ಮಾಡಿದೆ? ಕೊಂದೆಯಾ ರಾಕ್ಷಸ?"

ಹೆಚ್ಚೆಂದರೆ ನಾಗಿಯ ಮನೆಯಿಂದ ಶಿವಪುರಮಠದ ಬಾಗಿಲಿಗಿರುವುದು ಒಂದು ಮೈಲು. ಐದಾರು ನಿಮಿಷಗಳಲ್ಲಿ ಟೇಕ್ಸಿಯು ಮಠದ ಬಾಗಿಲಿಗೆ ಬಂದು ನಿಂದಿರಬೇಕು. ಆದರೆ ನಾಗಿ ಲಲಿತೆಯರಿಗೆ ಕೆಲವು ಘಂಟೆ ತಾವು ಟೇಕ್ಸಿಯೊಳಗಿದ್ದಂತೆ ತೋರಿತು. ಮುಳ್ಳಿನ ಮೇಲಿದ್ದಂತಿದ್ದರವರು ಅದರೊಳಗೆ. ಟೇಕ್ಸಿಯು ಮಠದಬಾಗಿಲಿಗೆ ಮುಟ್ಟುತ್ತಿರುವಾಗಲೆ ಲಲಿತೆಯು ಅದರ ಬಾಗಿಲು ತೆರೆಯಲೆತ್ನಿಸಿದಳು. ಆದರೆ ಅವಳಿಂದದು ಸಾಧ್ಯವಾಗಲಿಲ್ಲ. ಬಹಳ ಅಸಹಿಷ್ಣುತೆಯಿಂದ 'ಶೆಕ್' ಎಂದು ಇನ್ನೊಂದು ಕಡೆಯ ಬಾಗಿಲು ತೆರೆಯಲು ಪ್ರಯತ್ನಿಸಿದಳು. ಅಷ್ಟರಲ್ಲಿ ಟೇಕ್ಸಿಯು ನಿಂತಿತು. ಲಲಿತೆಯು ಬಾಗಿಲು ತೆರೆಯಲು ಚಡಪಡಿಸುವುದನ್ನು ಡ್ರ್ಯಾವರನು ಕಂಡು, "ಏನಿಷ್ಟವಸರಪ್ಪ! ಸ್ವಾಮಿರೆಲ್ಲಿಯಾದರೂ ಓಡಿ ಹೋಗುವುದಿಲ್ಲ" ಎಂದು ಬೆರಳುಗಳ ನಡುವೆಯಿದ್ದ ಬೀಡಿ ಕಡೆಯನ್ನೊಮ್ಮೆ 'ಹೂ' ಎಂದೆಳೆಯುವಷ್ಟರಲ್ಲಿ ನಾಗಿಯು, "ಡ್ರ್ಯಾವರ್ರೇ! ಓ ಡ್ರ್ಯಾವರ್ರೇ!! ಸ್ವಲ್ಪ ಬಾಗಿಲು ತೆರಿಯಿರಪ್ಪ! ಮತ್ತೆ ಬೀಡಿ ಎಳೆಯಿರಿ! ನಿಮ್ಮ ಬಾಗಿಲೊಂದು ಎಂತಹದಪ್ಪ!" ಎಂದಳು. ಲಲಿತೆಯು ಎರಡೂ ಬಾಗಿಲನ್ನು ತೆರೆಯಲಾರದೆ 'ಶೂ' ಎಂದು ಸೀಟಿಗೊರಗಿಬಿಟ್ಟಳು. ಡ್ರ್ಯಾವರನು ಬೀಡಿಕಡೆ ಬಿಸಾಡಿ ಕ್ರೋಪನ್ನೊಮ್ಮೆ ಸರಿಮಾಡಿ ಮುಂಡನ್ನೆತ್ತಿ ತೊಡೆಗಳ ನಡುವೆ ಸಿಕ್ಕಿಸಿ ಬಂದು ಟಪ್ಪನೆ ಬಾಗಿಲು ತೆರೆದು ಲಲಿತೆಯನ್ನೇ ಕಣ್ಣಿಟ್ಟು ನೋಡುತ್ತಾ ನಿಂತನು. ಲಲಿತೆಯು ಕೂಡಲೆ ಹೊರಬಿದ್ದು ಮಠದೊಳಗೋಡಿದಳು. ನಾಗಿಯು ಅವಳನ್ನು ಹಿಂಬಾಲಿಸಿದಳು.

ಒಂದೇ ಒಂದು ಕ್ಷಣದಲ್ಲಿ ಲಲಿತೆಯು ಸ್ವಾಮಿರ ಬೈಠಕುಖಾನೆಗೆ ಸರಿದಳು. ನಾಗಿಗೆ ಅವಳ ಬೆನ್ನು ಹಿಡಿದು ಹೋಗಲಾಗಲಿಲ್ಲ. ಒಳಗೆ ಸರಿದು ನೋಡುವಾಗ ಶಿವಾನಂದರೊಬ್ಬರೇ ಇದ್ದರು. ಮಗುವಿರಲಿಲ್ಲ. ಲಲಿತೆಯು ಒಂದು ಕ್ಷಣ ಸ್ತಂಭಿತಳಾಗಿ ನಿಂತುಬಿಟ್ಟಳು. ಅವಳ ಹೃದಯವು ತಪತಪೆನ್ನುತ್ತಿತ್ತು. ಸರ್ವಾಂಗ ಬೆವರಿ ನೀರು ಹರಿಯುತ್ತಿತ್ತು. ಉತ್ತರಕ್ಷಣದಲ್ಲೇ ಮಂಚದ ಮೇಲೆ ಪದ್ಮಾಸನ ಹಾಕಿ ಕುಳಿತು ಚಿಂತಾಮಗ್ನರಾಗಿರುವ

ಶಿವಾನಂದರ ಬಳಿಗೋಡಿ, ಅವರ ಕಾಲಿಗೆ ಬಿದ್ದು "ಮಗುವೆಲ್ಲಿ? ನನ್ನ ಮಗುವೆಲ್ಲಿ?" ಎಂದು ಕೂಗಿ ಬೋಧತಪ್ಪಿ ಬಿದ್ದುಬಿಟ್ಟಳು. ಇಷ್ಟರಲ್ಲಿ, ಶಿವಾನಂದರು ಮಗುವನ್ನು ಹಿಡಿದು ಮುದ್ದಾಡುತ್ತಿರಬೇಕೆಂದೇ ಕಲ್ಪಿಸಿಕೊಂಡು ಆ ಆನಂದದ ದೃಶ್ಯವನ್ನೊಮ್ಮೆ ನೋಡಬೇಕೆಂಬ ತವಕದಿಂದ ನಾಗಿಯು ಕೋಣೆಯೊಳಗೆ ಪ್ರವೇಶಿಸಿ ಮಗುವಿರದುದನ್ನು ಕಂಡು ತಬ್ಬಿಬ್ಬಾದಳು. "ಪರಾಕೆ, ಪರಾಕೆ! ಮಗುವೆಲ್ಲಿ? ಇದೇನು? ನನ್ನ ಲಲಿತೆಗೇನಾಯಿತು?" ಎಂದು ಓಡಿಹೋಗಿ ಲಲಿತೆಯನ್ನು ಹಿಡಿಯುವಷ್ಟರಲ್ಲಿ, ಶಿವಾನಂದರುಕುತ್ತಿಗೆಯೊಳಗೆ ತಡೆಗಟ್ಟಲ್ಪಟ್ಟ ಮಾತುಗಳಿಂದ, "ನಾಗಿ, ನಾಗಿ! ಲಲಿತೆಗೇನೂ ಆಗಿಲ್ಲ. ಬೇಗ ಹೋಗಿ ಸ್ವಲ್ಪ ನೀರು ತಾ" ಎಂದರು. ನಾಗಿಯು ಗಡಿಬಿಡಿಯಿಂದ ಓಡಿಹೋಗಿ,ತುಂಗವ್ಮ ಎಂಬ ಮಠದ ಅಜ್ಜಿಯೊಬ್ಬರು ಶುಭ್ರವಾಗಿ ತೊಳೆದು ನೀರು ತುಂಬಿಸಿಟ್ಟಿದ್ದ ತಂಬಿಗೆಯನ್ನು ಹೇಳದೆ ಕೇಳದೆ ಹಿಡಕೊಂಡು ಒಂದೇ ಉಸಿರಿನಿಂದ ಬೈಠಕು ಕೋಣೆಗೆ ಧಾವಿಸಿಬಂದಳು. "ಹೆ! ಹೆ!! ನನ್ನ ತಂಬಿಗೆ ಅದು; ಎಲ್ಲಿಗೊಯ್ಯುತ್ತಿ? ನನಗೀಗ ಬೇಕದು" ಎಂದು ತುಂಗವ್ಮನು ಬಹಳ ಸಿಟ್ಟಿನಿಂದ ಬಾಗಿದ ಬೆನ್ನನ್ನೊಮ್ಮೆ ನೆಟ್ಟಗೆ ಮಾಡಿ ನಾಗಿಯನ್ನು ಮನಸೇಚ್ಛೆ ಬೈಯ್ದು|ಅವಳ ಬೆನ್ನುಹಿಡಿದು ಸ್ವಾಮಿಾರ ಬೈಠಕು ಕೋಣೆಯ ಬಾಗಿಲವರೆಗೂ ಹೋದಳು. ಆದರೆ ಒಳಪ್ರವೇಶಿಸಲು ಧೈರ್ಯ ಬರಲಿಲ್ಲ. "ಹೀಗೂ ಉಂಟೆ ಪರಾಕೆ! ನಾನು ಮಡಿಯಿಂದ ತಂದಿಟ್ಟ"....ಎನ್ನುವಷ್ಟರಲ್ಲಿ ಅವಳ ಮುಖದ ಮೇಲೆಯೇ ಕೋಣೆಯ ಬಾಗಿಲು ಡಬ್ಬನೆ ಹಾಕಲ್ಪಟ್ಟಿತು. "ಶಿವ! ಶಿವ!! ನನಗೇಕೆ ಸಾವು ಬರುವುದಿಲ್ಲಪ್ಪ!" ಎಂದು ತುಂಗವ್ಮನು ಹಣೆಗೆ ಬಡಕೊಂಡು ಬೈಠಕು ಕೋಣೆಯ ಬಾಗಿಲಿಂದ ದಡದಡನೆ ಇಳಿದು ಹೋಗಿ ನಡೆದ ಸಂಗತಿಯನ್ನು ಸಿಕ್ಕಿ ಸಿಕ್ಕಿದವರೊಡನೆಲ್ಲಾ 'ಸಿಟ್ಟಿನಿಂದ ಹೇಳಿ ನಾಗಿಯನ್ನು ಶಪಿಸಿದಳು.

ನಾಗಿಯು ಲಲಿತೆಯ ಮುಖದ ಮೇಲೆ ನೀರು ಚುಮುಕಿಸಿ ಸೆರಗಿಂದೊರಸಿದಳು. ಶಿವಾನಂದರು ಹತ್ತಿರದಲ್ಲೇ ಲಲಿತೆಯನ್ನು ನೋಡುತ್ತಾ ನಿಂತಿದ್ದರು. ನೋಡುತ್ತಿದ್ದಂತೆಯೇ ಅವರ ಕಣ್ಣಲ್ಲಿ ಅದೇಕೋ ನೀರು ತುಂಬಿ ಬಂತು. ಅದನ್ನವರು ಮುಖ ತಿರುಗಿಸಿ ಒರಸುವಷ್ಟರಲ್ಲಿ, "ಅದೋ, ಮಗು! ಮಗು!! ನನ್ನ ಮಗು!" ಎಂದು ಲಲಿತೆಯು ಎಚ್ಚತ್ತು, "ಅಮ್ಮಾ, ಎಲ್ಲಿ?. ನನ್ನ ಮಗುವೆಲ್ಲಿ? ಎಲ್ಲಿ ಹೋಯಿತು? ಯಾರು ಕೊಂಡೊಯ್ದರು?" ಎಂದು

ಜಗ್ಗನೆ ಎದ್ದು ನಿಂತಳು. ಆಗ, "ಮಗುವೆಲ್ಲಿದೆಯೆಂದು ದಯಮಾಡಿ ಹೇಳ ಬಾರದೆ ಪರಾಕೆ? ಯಾಕೆ ಸುಮ್ಮನಿರುವಿರಿ?" ಎಂದು ನಾಗಿಯು ಬೇಡಿ ಕೊಂಡಳು ಕಣ್ಣೀರಿಟ್ಟು. ಶಿವಾನಂದರು ನಾಗಿ ಮತ್ತು ಲಲಿತೆಯರನ್ನೊಮ್ಮೆ ನೋಡಿದರು. ಆಮೇಲೆ ದೀರ್ಘ ಶ್ವಾಸಬಿಟ್ಟು ಸುಮ್ಮನೆ ನಿಂತುಬಿಟ್ಟರು. ಅವರ ಕಣ್ಣುಗಳಲ್ಲಿಯೂ ಧಾರೆಕಟ್ಟಿ ನೀರು ಹರಿಯತೊಡಗಿತು. ಎಷ್ಟೊಂದು ಕಟ್ಟಿಕೊಂಡರೂ ನಿಲ್ಲಲಾರದದು. "ಪರಾಕೆ ಸತ್ಯ ಹೇಳಿ. ಮಗುವನ್ನು ನೀವಲ್ಲವೇ ತರಹೇಳಿದುದು ಮೋಟರ್‌ಕಾರಿಗೆ? ಅದನ್ನಿಲ್ಲಿ ತರಲಿಲ್ಲವೆ? ನರಸಿಂಹಭಟ್ಟರೆಲ್ಲಿಹೋದರು? ಮಗುವೇನಾಯಿತು? ಸಂಗತಿ ಏನೆಂದು ತಿಳಿಸ ಬಾರದೆ? ಯಾಕೆ ಕಣ್ಣೀರಿಡುತ್ತಾ ನಿಂತಿರುವಿರಿ ಬುದ್ಧಿ?" ಎಂದು ನಾಗಿಯು ಪುನಃ ಕೇಳಿಕೊಂಡಳು. ಶಿವಾನಂದರು ಮತ್ತೂ ಮೌನವನ್ನೇ ಧರಿಸಿದ್ದರು. ಇಷ್ಟರಲ್ಲಿ, "ಪರಾಕೆ, ಪರಾಕೆ! ಬಾಗಿಲು ತೆರೆಯಿರಿ, ಬಾಗಿಲು ತೆರೆಯಿರಿ. ಕೆಲಸವೆಲ್ಲಾ ಸಾಂಗವಾಗಿ ನೆರವೇರಿತು" ಎಂದು ನರಸಿಂಹನು ಬಾಗಿಲು ಬಡಿದನು." ನರಸಿಂಹನು ಮಗುವನ್ನು ಹಿಡಕೊಂಡು ಬಂದನೆಂಬ ಉತ್ಸಾಹ ದಿಂದ ನಾಗಿಯು ಓಡಿಹೋಗಿ ಬಾಗಿಲು ತೆರೆದಳು. ಅವನು ಒಳಗೆ ಪ್ರವೇಶಿಸುವಾಗಲೆ, "ಶವ ಸಹ ಸಿಕ್ಕದಹಾಗೆ ಮಾಡಿದ್ದೇನೆ ಪರಾಕೆ" ಎಂದು ಹೇಳುವಷ್ಟರಲ್ಲಿ ನಾಗಿ ಲಲಿತೆಯರನ್ನು ಕಂಡು ಅವಾಕ್ಕಾದನು. "ಏನು? ಯಾವ ಶವ? ನನ್ನ ಕೂಸನ್ನು ಕೊಂದಿರೇ? ಅಯ್ಯೊ! ದೇವರೇ" ಎಂದು ನಾಗಿಯು ದೊಪ್ಪನೆ ನೆಲಕ್ಕೆ ಬಿದ್ದುಬಿಟ್ಟಳು. "ನರಸಿಂಹ, ಅದೋ ಅಲ್ಲಿ ನೀರಿದೆ ತಂಬಿಗೆಯಲ್ಲಿ! ನಾಗಿಗೆ ಬೋಧಬರುವಂತೆ ಮಾಡು" ಎಂದು ಮಿಂಚುಬಡಿದಂತೆ ನಿಂತಿರುವ ಲಲಿತೆಯ ಬಳಿಗೆ ಸರಿದು "ಲಲಿತ! ಲಲಿತ!" ಎಂದು ಗದ್ಗದ ಕಂಠದಿಂದ ಕರೆದು ಅವಳ ಕೈಹಿಡಿದರು. ಶಿವಾನಂದರ ಸ್ಪರ್ಶ ಮಾತ್ರದಿಂದ ಲಲಿತೆಯಲ್ಲಿ ಒಂದು ಕ್ಷಣ ನಿಂತುಹೋದಂತಿದ್ದ ರಕ್ತ ಚಲನೆಯು ಒಂದೇ ಸವನೆ ಪ್ರವಹಿಸಿದಂತಾಯಿತು. ಶಿವಾನಂದರು ಕಿರುಬೆರಳಿಂದ ದೂಡಿ ದರೆ ಬೀಳುವ ಅವಳು, ಅದಾವ ಶಕ್ತಿಯಿಂದಲೋ ಅವರು ಹಿಡಿದ ಕೈಬಿಡಿಸಿ ಅವರ ಕುತ್ತಿಗೆ ಹಿಡಿದೊತ್ತಿ "ನರಪಿಶಾಚಿ! ಎಲ್ಲಿ? ನನ್ನ ಮಗು ಎಲ್ಲಿ? ಹೇಳು ಬೇಗಹೇಳು! ಇಲ್ಲವಾದರೆ ಕತ್ತು ಹಿಸುಕಿ ಕೊಲ್ಲುವೆನು"ಎಂದು ಸಿಂಹಿಣಿಯಂತೆ ಗರ್ಜಿಸಿದಳು. "ಹೆ—ಹೆ—ಹೇಳು—ಹೊ—ಹೊ—ಹೊ"ಎಂದು ಸ್ವಾಮಿಗಳು

ಚೀರಿದರು. ಲಲಿತೆಯ ಹಿಡಿತಕ್ಕೆ ಸಿಕ್ಕಿ ಶಿವಾನಂದರು ಕಂಗೆಟ್ಟರು. ದೊಡ್ಡ ಜಟ್ಟಿಯಂತಿದ್ದ ಅವರಿಗೆ ಲಲಿತೆಯಂತಹ ಅಬಲೆಯರು ತೃಣ ಸಮಾನ. ಆದರೆ ಈ ಸಂದರ್ಭದಲ್ಲಿ ಅದಾವ ವಿಚಿತ್ರ ಶಕ್ತಿಯಿಂದಲೋ ಲಲಿತೆಯು ಅವರನ್ನು ಉಸಿರಾಡದಂತೆ ಮಾಡಿಬಿಟ್ಟಳು. ಅಷ್ಟರಲ್ಲಿ ನರಸಿಂಹನು, "ಪರಾಕೆ ಏನಾಯಿತು! ಏನಾಯಿತು!!" ಎಂದು ಓಡಿಬಂದು ಲಲಿತೆಯು ಶಿವಾನಂದರ ಕುತ್ತಿಗೆಯನ್ನು ಬಿಗಿಹಿಡಿದುದನ್ನು ನೋಡಿ ಒಂದೇ ಸಮನೆ ಅವಳ ಮೇಲೆ ಹಾರಿ ಕೈಬಿಡಿಸಲೆತ್ನಿಸಿದನು. ಆಗ ಮಗುವನ್ನು ಕೊಂದವನು ನರಸಿಂಹ ನೆಂದು ಲಲಿತೆಗೆ ಥಕ್ಕನೆ ಹೊಳೆದು ಅವಳ ಸಿಟ್ಟೆಲ್ಲಾ ಅವನಮೇಲೆ ಕೇಂದ್ರೀಕೃತ ವಾಯಿತು. ಅವಳು ಶಿವಾನಂದರ ಕುತ್ತಿಗೆ ಬಿಟ್ಟು, "ಮಗುವನ್ನೇನು ಮಾಡಿದೆ? ಕೊಂದುಹಾಕಿದೆಯಾ ರಾಕ್ಷಸ?" ಎಂದು ನರಸಿಂಹನ ಕುತ್ತಿಗೆ ಹಿಡಿದು ದೂಡಿಬಿಟ್ಟಳು. ಅವನು ಡಬ್ಬನೆ ನೆಲಕ್ಕೆ ಬಿದ್ದು ತಲೆ ಗೋಡೆಗೆ ತಾಗಿ ತಲೆತಿರುಗಿ ಬಿದ್ದುಬಿಟ್ಟನು. ಆಗ ಲಲಿತೆಯ ದೃಷ್ಟಿಯು ಬೋಧತಪ್ಪಿ ಬಿದ್ದಿರುವ ನಾಗಿಯ ಮೇಲೆ ಬಿತ್ತು. ಅವಳು ಕೂಡಲೆ ನಾಗಿಯ ಬಳಿಗೆ ಸರಿದು ಅವಳ ಕೈಗಳನ್ನು ಹಿಡಿದು ಭರದಿಂದ ಕುಲುಕಿಸಿ, "ಅಮ್ಮಾ! ಅಮ್ಮಾ!! ಅಮ್ಮಾ!!!" ಎಂದು ಕೂಗಿ ಕರೆದಳು. ಆಗ ನಾಗಿಗೂ ಎಚ್ಚರ ವಾಗಿ ಅವಳು ಎದ್ದು ಆವೇಗದಿಂದ ಲಲಿತೆಯನ್ನು ಬಿಗಿದಪ್ಪಿ, "ಮಗೂ ಲಲಿತ, ನೀನು ಮೊದಲೇ 'ನನ್ನನ್ನಾ ನರಕಕ್ಕೆಳೆಯ ಬೇಡೆಂ'ದು ಬಗೆಬಗೆಯಿಂದ ಬೇಡಿಕೊಂಡೆ. 'ಅತಿ ಆಶೆ ಗತಿಗೇಡುಮಾಡಿಕೊಳ್ಳಬೇಡಮ್ಮಾ!' ಎಂದು ಎಚ್ಚರಿಸಿದೆ. ಆದರೆ ಮಗು, ನಿನ್ನ ಮಾತಿಗೆ ನಾನು ಒಂದಿಷ್ಟು ಗಮನ ವೀಯದೆ ನನ್ನಿಚ್ಛಾನುಸಾರ ನಡೆದು ನಿನ್ನ ಜೀವನ ಸುಖವನ್ನು ಮಣ್ಣು ಗೂಡಿಸಿದೆ. ನಾನು ನಿನ್ನ ಮಾತೆಯಲ್ಲ, ಘಾತಕಿ. ಆಹ, ಆ ಎಳೆ ಕೂಸನ್ನು ಕೊಲ್ಲಲು ನರಸಿಂಹಭಟ್ರಗೆ ಮನಸ್ಸಾದರೂ ಹೇಗೆ ಬಂತಪ್ಪ! ಎಷ್ಟೊಂದು ಚಂದವಾಗಿದ್ದಿತು ಕೂಸು! ಅಹಹ........" ಎಂದು ಮುಂದೆ ಮಾತಾಡಲಾರದೆ ಗೋಳಿಟ್ಟಳು. ಆಗ ಲಲಿತೆಯು ಗಟ್ಟಿ ಮನಸ್ಸುಮಾಡಿ, "ನಾವು ಮಾಡಿದ ಕರ್ಮಕ್ಕೆ ಅನ್ಯರನ್ನು ದೂರಿ ಫಲವೇನಮ್ಮಾ? ನಡೆ ಇಲ್ಲಿಂದೊಮ್ಮೆ ತೊಲಗುವ" ಎಂದು ಇಬ್ಬರೂ ಹೊರಡಲುದ್ಯುಕ್ತರಾದರು. ಅಷ್ಟರವರೆಗೂ ಗೊಂಬೆಯಂತೆ ನಿಂತಿದ್ದ ಶಿವಾನಂದರು, "ನಿಲ್ಲಿರಿ, ಮೋಟರ್‌ಕಾರಿನಲ್ಲಿ ಹೋಗಿರಿ" ಎಂದರು.

"ನೀವು ನಮಗೆ ಈವರೆಗೆ ಮಾಡಿದ ಉಪಕಾರವೇ ಸಾಕು ಪರಾಕೆ! ನಮಗೆ ಮೋಟರ್ ಕಾರೇಕೆ? ನಡೆದೇ ಹೋಗುತ್ತೇವೆ" ಎಂದಳು ನಾಗಿ. ಆಗ ಶಿವಾನಂದರು "ನಿಲ್ಲಿರಿ, ನಾನು ಹೇಳುವುದನ್ನೆಲ್ಲಾ ಕೇಳಿ ಮತ್ತೆ ಹೋಗಿರಿ." ಎಂದರು. ನಾಗಿ ಲಲಿತೆಯರು ಮಾತಾಡದೆ ಸುಮ್ಮನೆ ನಿಂತರು. ಶಿವಾನಂದರ ಕಂಗಳಲ್ಲಿ ಪುನಃ ನೀರು ತುಂಬಿಬಂತು. ಅವರು "ನಾಗಿ, ಎಲ್ಲವನ್ನೂ ಮಾಡಿದವನು ನಾನು. ಹೃದಯವನ್ನು ಕಲ್ಲುಮಾಡಿ ಲಲಿತೆಯ ಮಗುವನ್ನು ಕೊಲ್ಲಿಸಿದವನು ನಾನು! ನರಸಿಂಹನು ಕೇವಲ ನನ್ನ ಹಸ್ತಕ. ಈ ಪಾಪ ಕೃತ್ಯಗಳ ಹೊಣೆಗಾರಿಕೆಯೆಲ್ಲಾ ಸಮಾಜದ್ದು. ನಾಗಿ, ನಾನೂ ಮಾನವನು, ನನಗೂ ಹೃದಯವಿದೆ; ಕರುಣೆಯ ಕರುಳಿದೆ. ನನ್ನ ವೀರ್ಯಕ್ಕೇನೇ ಹುಟ್ಟಿ, ನನ್ನ ಪ್ರತಿ ಮೂರ್ತಿಯಾದ ಹಸುಗೂಸನ್ನು ಕೊಲೆಮಾಡಿಸುವಾಗ ನನ್ನ ಹೃದಯವು ಅದೆಷ್ಟು ವೇದನೆಗೊಳಗಾಗಿದ್ದಿತೆಂಬುದನ್ನು ನನ್ನ ಹೊರತು ಇನ್ನಾರೂ ಅರಿಯಲಾರರು. ಆದರೆ ನನ್ನೀ ನಾಟಕವನ್ನು ಇಷ್ಟರವರೆಗೆ ನಡಿಸಿ, ಈ ಅಧಿಕಾರ ಸ್ಥಾನ-ಮಾನದ ಸವಿಯುಂಡು ಕೊಬ್ಬಿ ಇನ್ನು ಅನ್ಯರೀತಿಯ ಜೀವನ ಪಾರಂಭಿಸುವುದಾದರೂ ಹೇಗೆ? ನಾನು ದೀರ್ಘಕಾಲ ಯೋಚಿಸಿ, ಹಲವು ದಿನಗಳ ತೀವ್ರ ವೇದನೆಯನ್ನನುಭವಿಸಿ, ಏನೇ ಆಗಲಿ ಇದೇ ನಾಟಕವನ್ನು ಕೊನೆಯಂಕದ ವರೆಗೆ ನಡಿಸುವ ನಿರ್ಧಾರ ಮಾಡಿರುವೆನು. ಅದಕ್ಕೆ ಅಡ್ಡಿ ಬಂದಿರುವ ಲಲಿತೆಯ ಕೂಸನ್ನು ಕೊಲ್ಲಿಸುವ ಕಟುಕ ಹೃದಯವುಳ್ಳವನಾದೆನು. ನನ್ನೀ ನಾಟಕದಲ್ಲಿ ನೀವೂ ಭಾಗಿಗಳಾಗಿ ನನ್ನೊಂದಿಗೆ ಬಹಳ ಮುಂದುವರಿದಿರುವಿರಿ. ಇನ್ನು ನನ್ನನ್ನು ಕೈಬಿಡುವುದರಿಂದ ಫಲವಿಲ್ಲ. ನಾಗಿ, ನನ್ನ ಪ್ಲೇನೆಲ್ಲಾ ಆಕಾಶ ಕುಸುಮವಾಗಿರುವುದು. ಆದುದರಿಂದ ನಿನಗೆ ಕೊಟ್ಟ ಮಾತನ್ನು ನಡೆಸಲು ಸಾಧ್ಯವಾಗಿರುವುದಿಲ್ಲ. ಇನ್ನಾದರೂ ನನ್ನಿಂದ ಸಾಧ್ಯವಾದ ಸಹಾಯ ಮಾಡುವೆನು. ನೀವು ಈ ಸಂಗತಿಯನ್ನೆಲ್ಲಾ ಬಹಳ ರಹಸ್ಯವಾಗಿರಿಸಬೇಕು" ಎನ್ನುವಷ್ಟರಲ್ಲಿ "ಹಾ....!"ಎಂದು ಆಕಳಿಸಿ ನರಸಿಂಹನು ಮೈಕೊಡಹಿ ಎದ್ದು ನಿಂತನು. "ನರಸಿಂಹ, ಇವರನ್ನು ಮೋಟರ್ ಕಾರಿನಲ್ಲಿ ಅವರ ಮನೆಯಲ್ಲಿ ಬಿಟ್ಟು ಬಾ" ಎಂದರು ಶಿವಾನಂದರು. ನರಸಿಂಹನು ಚಕಿತನಾಗಿ ಒಂದು ಕ್ಷಣ ನಾಗಿ ಲಲಿತೆಯರನ್ನು ಕಣ್ಬಿಟ್ಟು ನೋಡುತ್ತಾ ನಿಂತು ಆ ಮೇಲೆ, "ಬನ್ನಿ ನಾಗಿ ಹೋಗುವ" ಎಂದು ಮುಂದಾಗಿ ಹೊರಟನು. ಅವನ ಹಿಂದೆ ನಾಗಿ ಲಲಿತೆಯರು ಹೊರಟುಹೋದರು.

## ಅಧ್ಯಾಯ ೯

## "ಮಗು, ಲಲಿತ! ನಾನಿನ್ನು ಬದುಕುವ ಆಶೆಯಿಲ್ಲ ನಿನ್ನ ಗತಿಯೇನು?"

ನಾಗಿ ಲಲಿತೆಯರನ್ನು ಮಠಕ್ಕೆ ಬರಹೇಳಿ ನರಸಿಂಹನು ಮೋಟರ್ ಕಾರಿಗೆ ಧಾವಿಸುವಷ್ಟರಲ್ಲಿ ಮಗುವು ಅಳಲಾರಂಭಿಸಿತ್ತು. ಅವನು ವಸ್ತ್ರದಿಂದ ಅದರ ಬಾಯಿ ಒತ್ತಿಟ್ಟು ಮೋಟರ್ ಕಾರನ್ನು ಶಿವಪುರದಿಂದ ದಕ್ಷಿಣಕ್ಕೋಡಿಸ ಹೇಳಿದನು. ಮಗುವು ಒದ್ದಾಡಲಾರಂಭಿಸಿತು. ನರಸಿಂಹನು ಅದರ ಮೂಗನ್ನೂ ಬಾಯಿಯನ್ನೂ ವಸ್ತ್ರದಿಂದ ಮತ್ತಷ್ಟು ಬಲವಾಗಿ ಒತ್ತಿಟ್ಟನು. ಈ ಪೈಶಾಚಿಕ ಒತ್ತಾಟದೆಡೆಯಿಂದ ಮಗುವಿನ ಕೂಗು ಒಂದೆರಡು ಸಲ ಹೊರ ನುಸುಳಿ ತೀವ್ರ ವೇಗದಿಂದೋಡುವ ಮೋಟರ್ ಕಾರಿನ ಶಬ್ದದೊಂದಿಗೆ ಸೇರಿಹೋಯಿತು. ಆಗ ನರಸಿಂಹನು ತನ್ನ ಒತ್ತಾಟವನ್ನು ಮತ್ತಷ್ಟು ಬಲಪಡಿಸಿದನು. ಶಿವಪುರದಿಂದ ಸುಮಾರು ನಾಲ್ಕು ಮೈಲು ದಕ್ಷಿಣದ ಹೊಳೆಯನ್ನು ಸಮೀಪಿಸುತ್ತಲೇ ನರಸಿಂಹನು ಮೋಟರ್ ಕಾರನ್ನು ನಿಲ್ಲಿಸ ಹೇಳಿದನು. ಅಷ್ಟರಲ್ಲಿ ಮಗುವಿನ ಪ್ರಾಣವು ಹಾರಿಹೋಗಿತ್ತು. ನರಸಿಂಹನು ಮೆಲ್ಲಮೆಲ್ಲಗೆ ತನ್ನ ಒತ್ತಾಟವನ್ನು ಸಡಿಲುಮಾಡಿ ಅದನ್ನು ದೃಢಪಡಿಸಿಕೊಂಡಿದ್ದನು. ಮೋಟರ್ ನಿಂತೊಡನೆಯೇ ಅವನು ಮಗುವನ್ನು ವಸ್ತ್ರದ ಹೊದಿಕೆಯೊಳಗೆ ಹಿಡಿದುಕೊಂಡು, "ಈಗ ಬರುತ್ತೇನೆ. ಈ ಮಗುವನ್ನು ಓ ಆ ಮನೆಗೆ ಕೊಟ್ಟುಬರುತ್ತೇನೆ" ಎಂದು ಹೇಳಿ ಸುತ್ತಲೂ ಎಚ್ಚರದಿಂದ ನೋಡುತ್ತಾ ರಸ್ತೆ ಬದಿಯ ತೆಂಗಿನ ತೋಪಿನೊಳಗೆ ಪ್ರವೇಶಿಸಿದನು. ಡ್ರ್ಯಾವರನು ಕಣ್ಮರೆಯಾದೊಡನೆಯೇ ಒಂದೇ ಸವನೆ ನದಿಯ ಕಡೆಗೆ ಧಾವಿಸಿ ಮಗುವಿನ ಶವವನ್ನು ಹೊಳೆಗೆಬಿಸಾಡಿ ಒಂದುಕ್ಷಣವೂ ನಿಲ್ಲದೆ ಹಿಂತಿರುಗಿದನು. ಹಿಂತಿರುಗಿದಾಗ ಅವನ ಶರೀರವುಕಂಪಿಸುತ್ತಿತ್ತು. ಶಕ್ತಿಯು ಕುಂದಿಹೋಗಿತ್ತು. ಅವನು ಬಹಳ ಪ್ರಯತ್ನಪಟ್ಟು ಹೆಜ್ಜೆಹಾಕಿಕೊಂಡು ಮುನ್ನಡೆದನು. ಇಡೀ ಶರೀರವು ಬೆವರಿ ನೀರಿಳಿದುಹೋಗಿತ್ತು. ಅವನು, ತಾನು ಮಾಡಿದ ಘೋರ ಪಾಪಪ್ರೇತವು ತನ್ನ ಬೆಂಬತ್ತಿಬರುವುದೊ ಎಂದು ಭೀತಿಗೊಂಡವನಂತೆ ನದಿಯು ಕಣ್ಮರೆಯಾಗುವ ವರೆಗೆ ಹಿಂದೆ ನೋಡುತ್ತ ನೋಡುತ್ತ ಸರಿಯುತ್ತಿದ್ದನು. ಆ

ಮೇಲೆ ಒಂದಿಷ್ಟು ಧೈರ್ಯಗೊಂಡು ತೋಟದಲ್ಲೊಂದೆಡೆ ನಿಂತು, ಎದೆ, ಹಣೆ, ಕುತ್ತಿಗೆಗಳ ಬೆವರನ್ನೆಲ್ಲಾ ಒರಸಿ ಇನ್ನೇನೂ ಗಾಬರಿಯಿಲ್ಲೆಂಬ ಸಮಾಧಾನ ದಿಂದ ಮೋಟರ್ ಕಾರಿನ ಬಳಿಗೆ ನಡೆದು ಬಾಗಿಲು ತೆರೆದು ಕೂತು "ಹೂಂ, ಹೋಗುವ" ಎಂದನು. ಆಗ ಡ್ರ್ಯಾವರನು, "ಮಗುವನ್ನೇನು ಮಾಡಿದಿರಿ? ಹ್ಯೊಗೆಯಲ್ಲಿ ಹೂಳಿದಿರೋ, ಹೊಳೆಗೆ ಬಿಸಾಡಿದಿರೋ?" ಎಂದು ಪ್ರಶ್ನಿಸಲು ನರಸಿಂಹನು ಅವಕ್ಕಾಗಿಹೋದನು. ತಾನು ಯಾರಿಗೂ ತಿಳಿಯದಂತೆ ಮಾಡಿದ ಕೆಲಸ ಈ ಡ್ರ್ಯಾವರಿಗೆ ತಿಳಿದಬಗೆ ಹೇಗೆಂದು ಅವನು ವಿಸ್ಮಯಗೊಂಡು ಯೋಚಿಸಹತ್ತಿದನು. ಆಗ, ಪುನಃ ಡ್ರ್ಯಾವರನು, "ಹೊಳೆಗೆ ಬಿಸಾಡಿದಿರೆಂದು ಕಾಣುತ್ತದೆ. ಅಲ್ಲವಾದರೆ ಇಷ್ಟು ಬೇಗ ಬರುವುದು ಹೇಗೆ?" ಎಂದು ಹೇಳಿ ಭರ್‍ರನೆ ಮೋಟರ್ ಚಾಲುಮಾಡಿದನು. ನರಸಿಂಹನು ಚಿಂತಾಮಗ್ನನಾಗಿ ಸುಮ್ಮನೆ ಕುಳಿತುಬಿಟ್ಟನು.

ಜೀವನದ ಮೂಲಾಧಾರವೇ ಆಶೆ. ಆದುದರಿಂದಲೇ ಪ್ರಾಣ ಹೋಗುವುದು ಮೊದಲು, ಆಶೆ ಅನಂತರವೆಂದು ಹೇಳುವುದು. ಈ ಆಶಾ ಬಲದಿಂದಲೇ ಎಷ್ಟೋಂದು ಜೀವಿಗಳು ಜೀವನ್ಮೃತಾವಸ್ಥೆಯಲ್ಲಿ ನರಳಿಕೊಂಡಿರು ವುದಿಲ್ಲ! ಆ ಆಧಾರವೊಂದು ತಪ್ಪಿತೆಂದರೆ ಎಂತಹ ಸುಖ ವೈಭವದ ಜೀವನವಾದರೂ ಕುಸಿದುಬೀಳುವುದಿಲ್ಲ! ಯಾವುದಾದರೊಂದು ವಿಷಯದಲ್ಲಿ ವಿಪರೀತ ಆಶೆಕಟ್ಟಿಕೊಂಡಿದ್ದವರಿಗೆ ಒಮ್ಮೆಯೇ ನಿರಾಶೆಯುಂಟಾಗುವುದೆಂದರೆ ಸಂಪೂರ್ಣ ಶಕ್ತಿಯಿಂದೋಡುವ ಇಂಜಿನನ್ನು ಹಠಾತ್ತಾಗಿ ನಿಲ್ಲಿಸಿಬಿಟ್ಟಂತೆ. ಇಂಜಿನು ನಿಂತುಹೋಗುವುದಲ್ಲದೆ ಅದರ ಸೂಕ್ಷ್ಮಾಂಗಗಳೆಲ್ಲಾ ಮುರಿದು ಹೋಗುವವು. ನಾಗಿಗೆ ಇದೇ ರೀತಿಯಾಗಿ ಹೋಯಿತು. ಶಿವಾನಂದರು ಮನೆ ಮತ್ತು ಆಸ್ತಿ ಮಾಡಿಕೊಡುವುದಂತಿರಲಿ, ತನ್ನ ಹಣವನ್ನೇ ಉಪಾಯ ದಿಂದ ಅಪಹರಿಸಿದಾಗಲೇ ಅವಳ ಜೀವನವೃಕ್ಷದ ತಾಯಿಬೇರು ಮುರಿದಿತ್ತು. ಆ ಮೇಲೆ ಲಲಿತೆಯ ಮಗುವನ್ನು ಕೊಲ್ಲಿಸಿದಾಗ ಅವಳ ಜೀವನವನ್ನು ಸಂಪೂರ್ಣವಾಗಿ ಕಾರ್ಮುಗಿಲು ಆವರಿಸಿತು. ತುಸು ಬೆಳಕನ್ನೀಯುತ್ತಿದ್ದ ಆ ಆಶಾ ಕಿರಣವೂ ಅದೃಶ್ಯವಾಗಿಬಿಟ್ಟಿತು. ಅವಳು ಜೀವನಕ್ಕಿಂತ ಸಾವು ಮೇಲೆಂದು ಬಗೆದು ಕೊರಗಿ ಕರಗಹತ್ತಿದಳು. ಅವಳ ಶಕ್ತಿಯೆಲ್ಲಾ ಸಂಪೂರ್ಣ ಕುಂದಿಹೋಯಿತು. ಆದರೆ ಲಲಿತೆಯ ಎದುರಲ್ಲಿ ಅವಳು ತನ್ನ

ಕೊರಗನ್ನೊಂದಿಷ್ಟು ತೋರಿಸದೆ ಸಮಾಧಾನ ಚಿತ್ತಳಂತೆ ನಟಿಸುತ್ತಿದ್ದಳು. ಲಲಿತೆಯಾದರೋ ಹೃದಯರಹಿತ ಯಂತ್ರದಂತೆ ನಡೆಯುತ್ತಿದ್ದಳು. ಯಾವುದರ ಗೊಡವೆಯೂ ಅವಳಿಗಿರಲಿಲ್ಲ. ಅವಳ ಚಿಂತೆಯು ಅಷ್ಟೊಂದು ಮಿತಿಮೀರಿದ್ದಿತು. ಅವಳ ಹೃದಯವನ್ನೇ ಕಲ್ಲುಮಾಡಿದ್ದಿತದು. ಅವಳ ಬುದ್ಧಿಯನ್ನು ಮಂದಗೊಳಿಸಿತ್ತು. ಕೂತಲ್ಲಿಂದ ಏಳಲು ನಾಗಿಯು ಒಂದು ಹತ್ತುಸಲ ಕರೆಯಬೇಕಿತ್ತು. ಒಂದೆಡೆ ನೋಡುತ್ತಾ ನಿಂತುಬಿಟ್ಟರೆ ನಾಗಿಯು ಮೈ ಕುಲುಕಿಸಿ ಕೈ ಹಿಡಿದು ಊಟಕ್ಕೋ ಮಲಗಲಿಕ್ಕೋ ಕರೆದೊಯ್ಯಬೇಕಿತ್ತು. ಮಲಗಿದವಳನ್ನು ಎಬ್ಬಿಸಲು ನಾಗಿಗೆ ಬಹಳ ಪ್ರಯಾಸವಾಗುತ್ತಿತ್ತು. ಇಂತಹ ಪರಿಸ್ಥಿತಿಯಲ್ಲಿಯೂ ಲಲಿತೆಯನ್ನು ಶಿವಾನಂದರು ಆಗಾಗ ಮೋಟರ್‌ಕಾರು ಕಳುಹಿಸಿ ಮಠಕ್ಕೆ ಕರೆಸುವುದನ್ನು ನಿಲ್ಲಿಸುತ್ತಿರಲಿಲ್ಲ. ನಾಗಿಯು, ಅವಳಿಗೆ ಸೌಖ್ಯವಿಲ್ಲ, ಕೂಡದೆಂದರೆ ಕೇಳುವವರಾರು? ಕಾಮೋದ್ರಿಕ್ತ ಮಾನವನು ಪ್ರತ್ಯಕ್ಷ ಪಿಶಾಚಿಯು. ಎಂತಹ ಅತ್ಯಾಚಾರಕ್ಕೂ, ಭೀಕರ ಕೃತ್ಯಕ್ಕೂ ಒಂದಿಷ್ಟು ಹೇಸನವನು. ಕಾಮದ ಹುಚ್ಚಿಗಿಂತ ಘೋರವಾದುದಿನ್ನಾವುದೂ ಇರಲಾರದು. ಅಂತೆಯೇ ಶಿವಾನಂದರು ತನ್ನ ಪಾಶವಿಕ ಕಾಮ ತೃಪ್ತಿಯ ಕೇವಲ ಒಂದು ಯಂತ್ರದಂತೆ ಲಲಿತೆಯನ್ನುಪಯೋಗಿಸುತ್ತಿದ್ದರು.

ನಾಗಿಯು ತನ್ನ ದಾರುಣ ದುಃಖವನ್ನೆಲ್ಲಾ ಒಳಗೊಳಗೇನೇ ನುಂಗಿ ಸೊರಗುತ್ತಿದ್ದಳು. ಚಿಂತಾಕೀಟವು ಅವಳ ಹೃದಯವನ್ನು ಕೊರೆಕೊರೆದು ತಿಂದು ಬರಿದು ಮಾಡಿತು. ಬೇಗನೆ ತನ್ನ ಸಾವು ನಿಶ್ಚಯವೆಂದವಳು ನಿರ್ಧರಿಸಿಕೊಂಡಳು. ಅವಳಿಗೆ ಕೂತರೆ ಫಕ್ಕನೆ ಏಳಲಾಗುತ್ತಿದ್ದಿಲ್ಲ. ಎದ್ದಾಗ ಗಿರ್ರನೆ ತಲೆತಿರುಗುತ್ತಿತ್ತು. ಜೀವಸಂಕಟವಾಗುತ್ತಿತ್ತು, ಕೈಕಾಲು ನಡುಗುತ್ತಿತ್ತು. ತಾನು ಸತ್ತರೆ ಲಲಿತೆಗೆ ಗತಿಯಿಲ್ಲೆಂಬ ತಳಮಳದಿಂದ ಅವಳು ಆದಷ್ಟು ದಿನದೂಡುವ ನಿರ್ಧಾರದಿಂದಿದ್ದಳು. ಆದರೆ ಅವಳ ಈ ತಲ್ಲಣವು ಎಷ್ಟೊಂದು ಹೆಚ್ಚಿತೋ ಅಷ್ಟು ವೇಗವಾಗಿ ಅವಳ ಶಕ್ತಿಯು ಕ್ಷಯಿಸಹತ್ತಿತ್ತು. ಕಡೆಗೆ ಅವಳು ಜ್ವರಪೀಡಿತಳಾಗಿ ಹಾಸಿಗೆ ಹಿಡಿದಳು.

ನಾಗಿಗೆ ಜ್ವರವು ವಿಶೇಷವಾಯಿತು. ಶಿವಾನಂದರು ಡಾಕ್ಟರ್ ಗಂಗಾಧರ ರಾಯರನ್ನು ಚಿಕಿತ್ಸೆಗಾಗಿ ಕಳುಹಿಸಿದರು. ಅವರು ಪರೀಕ್ಷಿಸಿ ಪ್ರಯೋಜನ

ವಿಲ್ಲೆಂಧು ಹೇಳಿದರು. ಲಲಿತೆಯು ರಾತ್ರಿಹಗಲು ತಾಯಿಯ ಕಾಲ ಬಳಿ ಯಲ್ಲಿಯೇ ಮೌನವಾಗಿ ಕುಳಿತು ಕಾಲಕಳೆಯುತ್ತಿದ್ದಳು. ಪಿಟ್ಟೆಂದು ಮಾತಾಡದೆ ಡಾಕ್ಟರ್ ಹೇಳಿದಂತೆ ಔಷಧಿಯನ್ನೂ ಬಾಯಾರಿಕೆಗೆ ಬಿಸಿನೀರನ್ನೂ ಕೊಡುತ್ತಿದ್ದಳು. ನಾಗಿಯನ್ನು ಉಪಚರಿಸಲು ಶಿವಾನಂದರು ಮಠದಿಂದೊಂದು ಹೆಂಗಸನ್ನು ಕಳುಹಿಸಿದ್ದರೂ ಆ ಹೆಂಗಸು, ನಾಗಿಲಲಿತೆಯರ ಕೆಲಸಮಾ ಡುವುದೇ ತನಗೆ ಅಪಮಾನವೆಂಬ ಮನೋವೃತ್ತಿಯಿಂದ ಸ್ವಾಮಿರು ಕಳುಹಿ ಸಿದುದಕ್ಕಾಗಿ ಕೆಲಸಮಾಡುವವಳಂತೆ ಮಾತ್ರ ನಟಿಸುತ್ತಿದ್ದಳು. ರಾತ್ರಿ ಎಂಟು ಘಂಟೆಗೆ ಮಲಗಿದರೆ ಏಳುವುದು ಬೆಳಿಗ್ಗೆ 7ಘಂಟೆಗೆ. ಹೀಗಾಗಿ ನಾಗಿಯ ಔಷ ಧೋಪಚಾರದ ಜವಾಬ್ದಾರಿಯೆಲ್ಲಾ ಲಲಿತೆಯ ಮೇಲೆಯೇ ಬಿದ್ದಿತು. ಅದನ್ನವಳು ಯಾಂತ್ರಿಕವಾಗಿ ಮಾಡುತ್ತಿದ್ದಳು.

ಸುಮಾರು 11ಘಂಟೆ ರಾತ್ರಿಯಾಗಿರಬಹುದು, ನಾಗಿಯು ಕಾಲ ಬುಡದಲ್ಲಿ ಕುಳಿತಿದ್ದ ಲಲಿತೆಯನ್ನು ಕಣ್ಣುಕಣ್ಣು ನೋಡಹತ್ತಿದಳು. ನೋಡುತ್ತಿದ್ದಂತೆಯೇ ಕಡೆ ಕಣ್ಣಲ್ಲಿ ನೀರುಹರಿಯತೊಡಗಿತು. "ಮಗು ಲಲಿತ ಹೋಗು ಮಲಗು" ಎಂದಳು ಕ್ಷೀಣ ಸ್ವರದಿಂದ. ಲಲಿತೆಯು ಕಣ್ಣೆತ್ತಿ ನಾಗಿಯ ಮುಖ ನೋಡಿದಳು. ಅವಳು ಕಣ್ಣೀರಿಳಿಸುವುದನ್ನು ಕಂಡು ಒಣಗಿ ಗಟ್ಟಿಕಟ್ಟಿ ಹೋಗಿದ್ದ ಅವಳ ಹೃದಯವು ಒಮ್ಮೆಯೇ ಕರಗಿ ಹೋಯಿತು. ಅವಳು ಆವೇಗದಿಂದ ನಾಗಿಯ ತಲೆಯ ಕಡೆಗೆ ಸರಿದು ಸೆರಗಿಂದಅವಳ ಕಣ್ಣೀರೊರಸಿ, "ಬೇಡಮ್ಮಾ ದುಃಖಿಸಬೇಡ! ಕಾಯಿಲೆ ಮತ್ತಷ್ಟು ಹೆಚ್ಚಾದೀತು!" ಎಂದು ಗದ್ಗದಿತಕಂಠದಿಂದ ಬೇಡಿಕೊಂಡಳು. ಆಗ ನಾಗಿಯ ದುಃಖವು ಇಮ್ಮಡಿಯಾಯಿತು. ಅವಳು "ಮಗು ಲಲಿತ! ನಾನಿನ್ನು ಬದುಕುವ ಆಶೆಯಿಲ್ಲ. ನಿನ್ನ ಗತಿಯೇನು"? ಎಂದು ಹೇಳಿ ಬಾಯ್ಬಿಟ್ಟು ಅತ್ತುಬಿಟ್ಟಳು. ಲಲಿತೆಯೂ ನಾಗಿಯ ಮುಖಕ್ಕೆ ಮುಖವಿತ್ತು ಅತ್ತಳು. ತಾಯಿಮಗಳಿಬ್ಬರೂ ಹೀಗೆ ತುಸುಹೊತ್ತು ಅತ್ತ ಮೇಲೆ ನಾಗಿಯು, "ಮಗು, ಜೀವಸಂಕಟವಾಗುತ್ತದೆ. ಸ್ವಲ್ಪ ನೀರುಕೊಡು" ಎಂದಳು. ಲಲಿತೆಯು ಅವಸರದಿಂದ ಓಡಿಹೋಗಿ ಆರಿದ ಬಿಸಿನೀರು ತಂದು ಚಮ್ಚದಿಂದ ನಾಗಿಯ ಬಾಯಿಗೆ ಬಿಡಲಾರಂಭಿಸಿದಳು. ಒಂದೆರಡು ಚಮ್ಚ ತೆಗೆದುಕೊಳ್ಳುವಷ್ಟರಲ್ಲೇ ನಾಗಿಯ ಹೃದಯದಲ್ಲಿ ಗರ್ಕೆಂಬ ಶಬ್ದವಾಯಿತು.

ಅವಳ ಪ್ರಾಣವು ಹಾರಿಹೋಯಿತು. ಆದರೆ ಲಲಿತೆಯು ಪಾಪ ಮತ್ತೂ ನೀರುಬಿಡಲೆತ್ನಿಸಿದಳು. ನೀರು ಒಳಗೆ ಹೋಗಲಿಲ್ಲ. ಕಣ್ಣುಗಳು ಅರೆ ಮುಚ್ಚಿಹೋಗಿದ್ದುವು. ಆಗ ಗಾಬರಿಗೊಂಡು ಕೈಯಲ್ಲಿದ್ದ ಚಮ್ಚ ಮತ್ತು ಲೋಟೆಯನ್ನೊಂದೆಡೆ ಬಿಸಾಡಿ, "ಅಮ್ಮಾ! ಅಮ್ಮಾ!!" ಎಂದು ತೋಳು ಹಿಡಿದು ಕುಲುಕಿದಳು. ಪುನಃ ಪುನಃ ಕುಲುಕಿದಳು. "ಅಮ್ಮಾ! ಅಮ್ಮಾ!! ಅಮ್ಮಾ!!!" ಎಂದು ಹತ್ತಿಪ್ಪತ್ತು ಸಲ ಕರೆದಳು. ಕಡೆಗೆ ಅವಳಿಗೆ ಅಮ್ಮನು ಮೃತಪಟ್ಟಿರುವಳೆಂದು ತಿಳಿಯಿತು. "ಅಯ್ಯೋ! ಅಮ್ಮಾ!!" ಎಂದು ದೊಪ್ಪನೆ ನೆಲಕ್ಕೆ ಬಿದ್ದು ಬೋಧಗೆಟ್ಟಳು.

---

## ಅಧ್ಯಾಯ ೧೦

### "ಒಳ್ಳೇ ಮಾತಿನಿಂದ ಕೈಮೊಹರು ಕೊಟ್ಟರೇ ಆಯಿತು! ಇಲ್ಲವಾದರೆ ಬಲಾತ್ಕಾರದಿಂದ ತೆಗೆದುಕೊಳ್ಳುವೆವು!"

ಮೊದಲೇ ಕಂದಿಹೋಗಿದ್ದ ಲಲಿತೆಯ ಜೀವನದ ಬೆಳಕು, ನಾಗಿಯು ಮೃತಳಾದ ಮೇಲೆ ಸಂಪೂರ್ಣವಾಗಿ ನೊಂದಿಹೋಯಿತು. ಅವಳ ಹೃದಯವು ಕಲ್ಲಾಗಿಬಿಟ್ಟಿತು. ಬುದ್ಧಿಯು ಸಂಪೂರ್ಣ ಮಂದವಾಯಿತು. ಅವಳು ತಾನಾಗಿ ಯಾವುದನ್ನೂ ಮಾಡುತ್ತಿದ್ದಿಲ್ಲ. ಒಂದೆಡೆ ಕೂತರೆ ಯಾರಾದರೂ ನೆರೆಯವರು ಬಂದು ಕೈಹಿಡಿದೆಳೆಯಬೇಕು ಪುನಃ ಏಳಲಿಕ್ಕೆ. ದಿನಕ್ಕೊಂದು ಊಟಮಾಡಿದರೆ ದೊಡ್ಡದು. ಅದು ಕೂಡಾ ಯಾರಾದರೂ ನೆರೆಯ ಹೆಂಗಸರು ಕನಿಕರಗೊಂಡು ಅಡಿಗೆಮಾಡಿ ಬಡಿಸಿದರೆ. ನೆರೆಯವರು ಯಾವಾಗಲೂ ಬಂದು ಎಷ್ಟೊಂದು, "ಲಲಿತ ಊಟಮಾಡು, ಲಲಿತ ಸ್ನಾನ ಮಾಡು, ಲಲಿತ ಅದು ಮಾಡು ಇದು ಮಾಡೆ"ಂದು ಹೇಳಿಯಾರು?

ಶಿವಾನಂದರು ಲಲಿತೆಯ ಅವಸ್ಥೆಯನ್ನು ತಿಳಿದು ಮಠದಿಂದ ಕೆಲಮಂದಿ ಹೆಂಗಸರನ್ನು ಅವಳ ಕೆಲಸಕ್ಕಾಗಿ ಕಳುಹಿಸಿದರು. ಆದರೆ ಅವರೆಲ್ಲರೂ ಒಂದೆರಡು ದಿನ ಲಲಿತೆಯೊಂದಿಗಿದ್ದು ಹಿಂದೆ ಹೋಗಿ "ಅವಳಿಗೆ ಹುಚ್ಚು,

ಬುದ್ಧಿಗೆಟ್ಟದೆ. ನಮಗೆ ಅವಳೊಂದಿಗಿರಲು ಸಾಧ್ಯವಿಲ್ಲ”ೆಂದು ಹೇಳುತ್ತಿದ್ದರು. ಹೀಗಾಗಿ ಕಡೆಗೆ ಮನೆಯಲ್ಲಿ ಲಲಿತೆಯೊಬ್ಬಳೇ ಇರಬೇಕಾಯಿತು. ಇದ್ದು ಸತ್ತಂತಿದ್ದಳವಳು.

ಅಡಚಣೆಯು ಮಾನವನನ್ನು ಎಂತಹ ಹೇಯ ಕೆಲಸಕ್ಕೆಲ್ಲಾ ಪ್ರೇರೇಪಿಸುವುದೆಂಬುದನ್ನು ಕಲ್ಪಿಸಲು ಸಾಧ್ಯವಿಲ್ಲ. ಅದಕ್ಕೊಳಗಾದವನಿಗೆ ಯಾವ ನೀತಿ ನಿಯಮವಾಗಲಿ ನಗೆ ನಾಚಿಕೆಯಾಗಲಿ ಇರಲಾರದು. ಹೇಗಾದರೂ ಅಡಚಣೆಯಿಂದೊಮ್ಮೆ ಪಾರಾಗಬೇಕೆಂಬೊಂದೇ ಯೋಚನೆ ಅವನಿಗೆ. ಶಿವಾನಂದರ ಹಣದ ಅಡಚಣೆಯನ್ನಾದರೂ ಹೇಳಿತೀರದು. ಸಂಪೂರ್ಣವಾಗಿ ಅವರ ಕೈಕಟ್ಟಿಹೋಗಿತ್ತು. ಒಬ್ಬರಾದರೂ ಅವರನ್ನು ನಂಬುವವರಿದ್ದಿಲ್ಲ. ಮಠದ ಚಿನ್ನವೆಲ್ಲಾ ಬರಿದಾಗಿತ್ತು. ಮಾತ್ರವಲ್ಲದೆ ಲಲಿತೆಯ ಮೈಯಲ್ಲಿ ಕರಿಮಣಿಯೊಂದನ್ನು ಮಾತ್ರ ಬಿಟ್ಟಿದ್ದರು. ಲಲಿತೆಗೆ ಅದೂ ಬೇಕಾಗಿದ್ದಿಲ್ಲ. ಬಿಟ್ಟ ತಲೆಗೂದಲನ್ನು ಕಟ್ಟುವ, ಉಟ್ಟ ಸೀರೆಯನ್ನು ಬದಲಾಯಿಸುವ ಗೊಡವೆಯೂ ಇಲ್ಲದ ಅವಳಿಗೆ ಕರಿಮಣಿಯಾದರೂ ಯಾಕೆ? ಶಿವಾನಂದರು ನರಸಿಂಹನನ್ನು ಕಳುಹಿಸಿ ನಾಗಿಯ ಚಿನ್ನದ ಪೆಟ್ಟಿಗೆಯನ್ನು ಕೂಡಾ ತರಿಸಿ ಅದರೊಳಗಣ ಆಭರಣಗಳನ್ನೆಲ್ಲಾ ಮಾರಿಬಿಟ್ಟರು. ಎಷ್ಟು ಹಣ ಸಿಕ್ಕಿದರೂ ಶಿವಾನಂದರಿಗೆ ಸಾಕಾಗುತ್ತಿದ್ದಿಲ್ಲ. ಒಂದು ಕ್ಷಣದಲ್ಲಿ ಅವರ ಕೈ ಬರಿದಾಗುತ್ತಿದ್ದಿತು. ಅವರು ಹಣ ಪಡೆಯುವ ಬೇರೆಬೇರೆ ಉಪಾಯಗಳನ್ನು ಕ್ಷಣ ಕ್ಷಣ ಕಂಡುಕೊಳ್ಳಬೇಕಾಗಿತ್ತು. ಒಂದು ದಿನ ಅವರು ಯಾವ ಉಪಾಯವೂ ತೋರದೆ ಬಹಳ ಚಿಂತಾಮಗ್ನರಾಗಿದ್ದಾಗ ಫಕ್ಕನೆ ಒಂದು ಯೋಚನೆ ಹೊಳೆದು ಹೊಸ ಜೀವವೇ ಬಂದಂತಾಗಿ ನರಸಿಂಹನನ್ನು ಕರೆದು ಗುಟ್ಟಿನಿಂದೊಂದು ಸಂಗತಿ ತಿಳಿಸಿದರು. ನಾಗಿಯ ಹೆಸರಲ್ಲಿ ಬೇಂಕಿನಲ್ಲಿ ಎರಡು ಸಾವಿರ ರೂಪಾಯಿಗಳ ವರೆಗುಂಟೆಂಬುದು ಅವರಿಗೆ ತಿಳಿದಿತ್ತು. ಏನು ಮಾಡಿದರೂ ಬೇಂಕಿನವರು ಶಿವಾನಂದರಿಗದನ್ನು ಕೊಡಲೊಪ್ಪಲಿಲ್ಲ. ಆಗ ಅವರು ಅದನ್ನು ಪಡೆಯಲು ಬೇರೇನಾದರೂ ಉಪಾಯ ಮಾಡಬೇಕಾಯಿತು. ಆ ಕುರಿತಾಗಿಯೇ ಅವರು ಬಹಳವಾಗಿ ಯೋಚಿಸಿ ಕಡೆಗೊಂದು ಉಪಾಯ ಹೊಳೆದು ನರಸಿಂಹನೊಡನೆ ಗುಟ್ಟನಿಂದ ಹೇಳಿದುದದನ್ನು.

ಸುಮಾರು ಹತ್ತು ಹನ್ನೊಂದು ಘಂಟೆ ರಾತ್ರಿಯಾಗಿರಬಹುದು.

ಲಲಿತೆಯು ರಸ್ತೆಬದಿಯ ಬಾಗಿಲು ಕೂಡಾ ಹಾಕದೆ ಚಾವಡಿಯಲ್ಲಿ ಸುಮ್ಮಗೆ ಕುಳಿತಿದ್ದಳು. ಅಂದು ನೆರೆಯುವರಾರಾದರೂ ಲಲಿತೆಯ ಮನೆಗೆ ಬಂದು ದೀಪ ಹಚ್ಚಿ, "ಲಲಿತ, ಇಲ್ಲೇಕೆ ಕೂತಿರುವೆ? ಬಾ, ಊಟಮಾಡೆಂ"ದು ಒತ್ತಾಯ ಮಾಡಿ ಬಡಿಸಿ ಮಲಗಿಸಿ ಹೋಗಿರಲಿಲ್ಲ. ಮನೆಯಲ್ಲೆಲ್ಲಾ ಕತ್ತಲೆಯು ಕವಿದಿತ್ತು. ನರಸಿಂಹನೂ ಇನ್ನೊಂದು ಧಾಂಡಿಗ ವ್ಯಕ್ತಿಯೂ ಮನೆಯೊಳಗೆ ಪ್ರವೇಶಿಸಿದರು. ನರಸಿಂಹನು ಟೋರ್ಚ್ ಲೈಟನ್ನು ಚಮುಕಿಸಿ ನೋಡಿದಾಗ ಲಲಿತೆಯು ಚಾವಡಿಯ ಒಂದು ಮೂಲೆಯಲ್ಲಿ ಗೋಡೆಗೊರಗಿ ಕಾಲು ನೀಡಿ ಕುಳಿತಿದ್ದುದು ತೋರಿಬಂತು. ನರಸಿಂಹನು ಕಿಸೆಯಿಂದ ಬೆಂಕಿಪೆಟ್ಟಿಗೆಯಿಂದ ಕಡ್ಡಿ ತೆಗೆದು ಕೀರಿ ಚಾವಡಿಯ ಗೋಡೆಯಲ್ಲಿದ್ದ ಚಿಮಣಿಯೊಂದಕ್ಕೆ ದೀಪ ಹಚ್ಚಿದನು. ಲಲಿತೆಯು ಗೊಂಬೆಯಂತೆ ಕುಳಿತಿದ್ದಳು. ದೃಷ್ಟಿ ಕೂಡಾ ಅತ್ತಿತ್ತ ಚಲಿಸಲಿಲ್ಲ. ನರಸಿಂಹನು ಆಶ್ಚರ್ಯಗೊಂಡು ಲಲಿತೆಯನ್ನೇ ತುಸು ಹೊತ್ತು ನೋಡುತ್ತಾ ನಿಂತನು. ಅವಳ ಕಂಗಳು ಕಳೆಗುಂದಿ ಹೂತುಹೋಗಿದ್ದುವು. ಶವದ ಮುಖದಂತಾಗಿದ್ದಿತು ಮುಖ. ಅವನ ಪೈಶಾಚಿಕ ಹೃದಯವೂ ಒಂದೊಮ್ಮೆ ಕರಗಿ ನೀರಾಯಿತು. ಮಾನವ ಸಹಜ ಅನುಕಂಪನ ವುಂಟಾಯಿತು, ಆತನ ಅಂತರಾಳದಲ್ಲೊಮ್ಮೆ. ಅವನು ಲಲಿತೆಯನ್ನು ಮತ್ತೂ ನೋಡುತ್ತಾ ನಿಂತನು. ತಾನು ಈ ನಿರ್ದುಷ್ಟ ಬಾಲೆಯ ಕುರಿತು ಮಾಡಿದ ದುಷ್ಕೃತ್ಯಗಳೆಲ್ಲಾ ಒಮ್ಮೆಯೇ ಅವನ ಹೃದಯವನ್ನು ಸವರ ಹತ್ತಿದುವು. ಅಷ್ಟರಲ್ಲಿ ದೇಜುವು "ಭಟ್ರೇ, ಕಣ್ಣು ಕಣ್ಣು ನೋಡುತ್ತಾ ನಿಂತು ಆಲೋಚಿಸುತ್ತಿರುವುದೇನನ್ನು? ಶೀಘ್ರವಾಗಿ ನಮ್ಮ ಕೆಲಸ ಮುಗಿಸಿ ಕೊಂಡು ಹೋಗುವ" ಎಂದನು. ನರಸಿಂಹನು ಕನಸಿನಿಂದೆಚ್ಚತ್ತವನಂತೆ, "ಆಯ್ತಾಯ್ತು ಮಾಡುವ" ಎಂದು ಮತ್ತೂ ಸುಮ್ಮನೆ ನಿಂತನು. ಆಗ ದೇಜುವು, "ಕೈ ಮೊಹರ ತೆಗೆದುಕೊಳ್ಳಿ ಭಟ್ರೆ, ತಡವಾಗುತ್ತದೆ ನಮಗೆ" ಎಂದು ಪುನಃ ಎಚ್ಚರಿಸಿದನು. ಆಗ ನರಸಿಂಹನು, "ಲಲಿತ, ಶಿವಾನಂದರು ನಿನ್ನ ಕೈ ಮೊಹರು ಪಡೆಯಲು ನಮ್ಮನ್ನು ಕಳುಹಿಸಿದುದು. ಅವರಿಗೇಕೋ ನಿನ್ನ ಕೈಮೊಹರು ಬೇಕಾಗಿದೆಯಂತೆ; ಬೇಗ ಕೊಡು, ನಾವು ಹೋಗುತ್ತೇವೆ" ಎಂದನು. ಲಲಿತೆಯು ಮಾತಾಡಲಿಲ್ಲ. ಮುಖವೆತ್ತಿ ನೋಡಲಿಲ್ಲ. "ಈ ಎರಡು ಕಾಗದಗಳಿಗೆ ಕೈಮೊಹರುಕೊಡು ಲಲಿತ. ನಿನಗೇನಾದರೂ ಅದರಿಂದ

ಬಾಧಕವಿಲ್ಲ. ಸ್ವಾಮಿರಿಗೇಕೋ ಬೇಕಾಗಿದೆಯಂತೆ” ಎಂದು ನರಸಿಂಹನು ಕೈಮುದ್ರೆತೆಗೆಯುವ ಶಾಯಿಯ ಕರಡಿಗೆಯೊಂದರ ಬಾಯಿತೆರೆದು ಲಲಿತೆಯ ಬಳಿಯಿಟ್ಟು, “ಇಗೋ ಇಲ್ಲಿ ಕೈಮೊಹರು ಹಾಕು” ಎಂದು ಕಾಗದ ಬಿಡಿಸಿ ತೋರಿಸಿದನು. ಆದರೆ ಲಲಿತೆಯು ಯಥಾಪ್ರಕಾರ ಮೌನವಾಗಿದ್ದಳು. ಅವಳಿಗೆ ನರಸಿಂಹನು ಹೇಳುವುದೆಲ್ಲಾ ಕೇಳುವುದೇ ಇಲ್ಲೆಂಬಂತೆ ತೋರುತ್ತಿತ್ತು. ಕಡೆಗೆ ನರಸಿಂಹನು, “ಕೊಡು ಲಲಿತ, ಕೈಮೊಹರು ಕೊಡು. ನಿನಗೇನೂ ಅದರಲ್ಲಿ ಅಪಾಯವಿಲ್ಲ. ಅದಕ್ಕೆ ನಾನು ಜವಾಬ್ದಾರಿ”ಎಂದು ಬೆನ್ನುತಟ್ಟಿದನು. ಆದರೆ ಲಲಿತೆಯು ಮೌನವಾಗಿಯೆ ಇದ್ದಳು. ನರಸಿಂಹನು ಮೃದುಮಾತುಗಳಿಂದಲೇ ಲಲಿತೆಯನ್ನೊಲಿಸಿಕೊಂಡು ಕೆಲಸಮಾಡಬೇಕೆಂದು ಬಗೆದಿದ್ದ. ಯಾಕಂದರೆ ಲಲಿತೆಯನ್ನು ಕಂಡು ಆತನ ಮನಸ್ಸು ಇಂದು ಅದೇಕೋ ಕರಗಿಹೋಗಿತ್ತು.

ಅಷ್ಟರಲ್ಲಿ ದೇಜುವು, “ನಿಮ್ಮ ಸಮಾಧಾನದ ಮಾತನ್ನೆಲ್ಲಾ ಅವಳು ಕೇಳುವ ಹಾಗಿಲ್ಲ. ಭಟ್ರೆ, ನಾವು ಎಷ್ಟು ಹೊತ್ತು ಕಾಯುವುದಿಲ್ಲಿ? ಮಧ್ಯ ರಾತ್ರಿಯಾಗುತ್ತಾ ಬಂತು. ನಾವೇ ಕೈ ಹಿಡಿದು ಮೊಹರು ತೆಗೆದುಕೊಳ್ಳುವ” ಎಂದನು. “ನಿನಗೆ ಅವಸರವಾಗುತ್ತದಾದರೆ ನೀನೇ ತೆಗೆದುಕೋ ಬಲಾತ್ಕಾರದಿಂದ. ನನ್ನೊಡನೇನು ಹೇಳುವುದು?” ಎಂದ ನರಸಿಂಹ ಸಿಟ್ಟಿನಿಂದ. ದೇಜುವು ಉದ್ಧಟ ಮನೋವೃತ್ತಿಯವ. ಇದು ಹೊರತು ಮಠದಲ್ಲಿ ಶಿವಾನಂದರ ಹೊರತು ಮತ್ತಾರಿಗೂ ಹೆದರುತ್ತಿದ್ದಿಲ್ಲ. ಮತ್ತಾರ ಮಾತೂ ಕೇಳುತ್ತಿದ್ದಿಲ್ಲ. ತನಗಿಷ್ಟ ಬಂದ ಕೆಲಸ ಮಾಡಿಕೊಂಡು ಶಿವಾನಂದರ ಅಂಗರಕ್ಷಕನಂತಿದ್ದವ. ನರಸಿಂಹನು ಹಂಗಿಸಿ ಮಾತಾಡಿದೊಡನೆಯೇ ಅವನಿಗೆ ಕೋಪವು ತಲೆಗೇರಿಬಿಟ್ಟಿತು. ಅವನು “ನೀವೇನು ಇಷ್ಟೊಂದು ಹಂಗಿಸಿ ಮಾತಾಡುವುದು? ನನಗೊಂದು ಕೈಮೊಹರು ತೆಗೆದುಕೊಳ್ಳಲಿಕ್ಕೊ ಸಾಧ್ಯವಿಲ್ಲವೇ? ನೋಡುವ ಹಾಗಾದರೆ?” ಎಂದು ಒರಟುತನದಿಂದ ಲಲಿತೆಯ ಕೈಹಿಡಿದೆಳೆದನು. ಅವಳದನ್ನು ಹಿಂದಕ್ಕೆಳೆದುಕೊಂಡಳು. ಆಗ ದೇಜುವು, “ಒಳ್ಳೇ ಮಾತಿನಿಂದ ಕೈಮೊಹರು ಕೊಟ್ಟೆಯಾಯಿತು! ಇಲ್ಲವಾದರೆ ಬಲಾತ್ಕಾರದಿಂದ ತೆಗೆದುಕೊಳ್ಳುವೆವು” ಎಂದು ಗದರಿಸಿದನು. ಲಲಿತೆಯು ಮಾತಾಡಲಿಲ್ಲ. ಆಗ ದೇಜುವು ಪುನಃ ಲಲಿತೆಯ ಕೈಯನ್ನು ಬಲವಾಗಿ ಹಿಡಿದು, “ನೀವೇನು ನೋಡುತ್ತಾ ಕುಳಿತಿರುವುದು ಭಟ್ರೆ?

ತನ್ನಿಲ್ಲಿ ಶಾಯಿ ಕರಡಿಗೆ ಮತ್ತು ಕಾಗದ! ಕೈಮೋಹರು ಕೊಡದೆ ಎಲ್ಲಿ ಹೋಗುತ್ತಾಳೆ ನೋಡುವ ಇವಳು?" ಎಂದನು. ಆಗ ಲಲಿತೆಗೆ ಅದೆಲ್ಲಿಂದ ಶಕ್ತಿ ಬಂದಿತೋ ಏನೋ! ಅವಳು ಥಟ್ಟನೆ ಕೈಯನ್ನೆಳೆದು ದೇಜುವಿನ ಬಲ ವಾದ ಹಿಡಿತದಿಂದ ಬಿಡಿಸಿಕೊಂಡಳು. ದೇಜುವು ಪುನಃ ಅವಳ ಕೈ ಹಿಡಿಯ ಲೆತ್ನಿಸಿದ ಬಹಳ ಸಿಟ್ಟುಗೊಂಡು. ಆಗ ಲಲಿತೆಯ ಮುಖವು ವಿಕಾರ ಗೊಂಡಿತು. ಅವಳು, ದೇಜುವು ಕೈಯನ್ನು ಹಿಡಿಯುವಷ್ಟರಲ್ಲಿ ಅವನ ಕೈಯನ್ನು ಬಲವಾಗಿ ಕಚ್ಚಿದಳು. ಕಚ್ಚಿ ಹಿಡಿದವಳು ಬಿಡಲೇ ಇಲ್ಲ. ದೇಜುವು ಅವಳ ಬಾಯಿಯಿಂದ ಕೈ ಬಿಡಿಸಿಕೊಳ್ಳಲು ಮಾಡಿದ ಪ್ರಯತ್ನ ವೆಲ್ಲಾ ನಿಷ್ಫಲವಾಯಿತು. ಮುಂಗೈಯಿಂದ ರಕ್ತವು ಹರಿಯಲಾರಂಭಿಸಿತು. ಅಸಹನೀಯ ನೋವುಂಟಾಯಿತು. ಅವನು ಲಲಿತೆಯ ಜುಟ್ಟು ಹಿಡಿದೆಳೆದ, ಕುತ್ತಿಗೆ ಒತ್ತಿ ಹಿಡಿದ, ಏನು ಮಾಡಿದರೂ ಅವಳು ಕಚ್ಚಿ ಹಿಡಿದ ಕೈಬಿಡಲಿಲ್ಲ. ಥಾಂಡಿಗ ದೇಜುವು ತಬ್ಬಿಬ್ಬಾದ! ಅವನ ಮೈಯೆಲ್ಲಾ ಬೆವರಿತು. ತಲೆ ತಿರುಗಿತು, ಅವನು, "ಭಟ್ರೇ ನೀವೇನು ಚಂದ ನೋಡುತ್ತಿರುವುದೇ? ಬಿಡಿಸಬಾರದೆ? ಎಂದ. ನರಸಿಂಹ ಬೆದರಿಹೋಗಿದ್ದನು. ತನ್ನ ಮೇಲೆಲ್ಲಿಯಾ ದರೂ ಬಿದ್ದರೆ ಮಾಡುವುದೇನೆಂದು ಅವನು ಹತ್ತಿರ ಬಾರದೆ ದೂರವೇ ನಿಂತಿ ದ್ದನು. ಆಗ ದೇಜುವು ಬಾಯ್ಬಿಟ್ಟು ಕೂಗಿದನು. "ಭಟ್ರೇ ಅಷ್ಟು ಮಾಡಿ ಸ್ವಾಮಿ! ಒಂದೊಮ್ಮೆ ಬಿಡಿಸಿ!"ಎಂದು ಬೇಡಿಕೊಂಡನು. ಆಗ ನರಸಿಂಹನಿಗೆ ಸುಮ್ಮನಿರಲು ಸಾಧ್ಯವಿಲ್ಲದಾಯಿತು. ಆದರೆ ಅವನನ್ನು ಬಿಟ್ಟು ತನ್ನ ಮೇಲೆ ಬಿದ್ದರೆ ಗತಿಯೇನೆಂಬ ಭೀತಿಯೂ ಪೀಡಿಸ ಹತ್ತಿತು. ಕಟ್ಟಕಡೆಗೆ ನಿರ್ವಾಹವಿಲ್ಲದೆ ಆದುದಾಗಲೆಂದು ಲಲಿತೆಯ ತಲೆಕೂದಲನ್ನು ಎರಡು ಕೈ ಗಳಿಂದಲೂ ಬಲವಾಗಿ ಹಿಡಿದು ನಿರ್ದಯವಾಗಿ ಭರದಿಂದ ಹಿಂದಕ್ಕೆಳೆದನು. ದೇಜುವಿನ ಮುಂಗೈಯು ಲಲಿತೆಯ ಬಾಯಿಯಿಂದ ತಪ್ಪಿತು. ಆದರೆ ಅಷ್ಟು ಭಾಗದ ಮಾಂಸ ಕೂಡಾ ಹೋಗಿತ್ತು. ಲಲಿತೆಯ ಬಾಯಿ ಮತ್ತು ತುಟಿ ಯೆಲ್ಲಾ ರಕ್ತಮಯವಾಗಿತ್ತು. ಕಣ್ಣುಗಳು ಕೆಂಪಡರಿ ಹೋಗಿದ್ದುವು. ಅವಳ ಸ್ವರೂಪವು ಉಗ್ರವಾಗಿತ್ತು. ಅವಳು ಹಿಂತಿರುಗುವಷ್ಟರಲ್ಲೇ ನರ ಸಿಂಹನು ಪಲಾಯನ ಮಾಡಿದನು. ಅವನ ಹಿಂದೆಯೇ ದೇಜುವೂ ಓಡಿ ದನು. ಇವರಿಬ್ಬರ ಬೆನ್ನಲ್ಲಿಯೇ ಲಲಿತೆಯೂ ಮನೆಯಿಂದ ಹೊರಬಿದ್ದಳು.

## ಅಧ್ಯಾಯ ೧೧

### "ಭಿಕಾರಿಣಿ ಬಂದಳು ಭಿಕಾರಿಣಿ! ಇದೋ ಭಿಕಾರಿಣಿಗೆ ಕೊಡುತ್ತೇನೆ ನಿನ್ನನ್ನು ನೋಡು!"

ನಿಶಾದೇವಿಯು ತನ್ನ ಸಂಪೂರ್ಣ ಸಾಮ್ರಾಜ್ಯ ಸ್ಥಾಪಿಸಿರುವ ಕರಾಳ ರಾತ್ರಿ. ಆ ವಿಕಟ ಅಟ್ಟಹಾಸದ ಭೀಕರತೆಯು ಎಲ್ಲೆಲ್ಲಿಯೂ ನೆಲೆಗೊಂಡಿತ್ತು. ಇಂತಹ ರಾತ್ರಿಯಲ್ಲಿ ಮನೆಯಿಂದ ಹೊರಬಿದ್ದ ಲಲಿತೆಯು ಒಂದೇ ಸಮನೆ ರಸ್ತೆ ಹಿಡಿದೋಡಿದಳು. ಯಾವ ದಿಕ್ಕಿಗೆ, ಎಲ್ಲಿಗೆ, ಏತಕ್ಕಾಗಿ ಓಡುವುದೆಂಬು ದೊಂದನ್ನೂ ಅವಳರಿಯಳು. ಅಷ್ಟೊಂದು ಅವಳ ಬುದ್ಧಿಯು ಕೆಟ್ಟು ಹೋಗಿತ್ತು. ಓಡಿದಳು, ಮತ್ತೂ ಓಡಿದಳು. ಓಡಿ ಓಡಿ ರಸ್ತೆಯ ಬದಿಯ ಹೊಂಡವೊಂದಕ್ಕೆ ಕಾಲು ಬಿದ್ದು ದೊಪ್ಪನೆ ಬಿದ್ದುಬಿಟ್ಟಳು. ಚೆನ್ನಾಗಿ ಪೆಟ್ಟಾದುದರಿಂದ ಫಕ್ಕನೆ ಏಳಲಾಗಲಿಲ್ಲ.

ಬಹಳವಾಗಿ ಹೋರಾಡಿ ರಕ್ತಸುರಿಸಿ ರಾತ್ರಿಯ ಕರಾಳ ಧಾಳಿಯನ್ನೋಡಿಸಿ ದಿನವು ತನ್ನ ವಿಜಯ ಧ್ವಜವನ್ನು ಮೂಡುದಿಕ್ಕಿನ ಕೋಡುಗಲ್ಲ ಮೇಲೇರಿಸುವಷ್ಟರಲ್ಲೇ ಕೆಲಮಂದಿ ಕೂಲಿಕಾರ ಹೆಂಗಸರು ರಸ್ತೆಬದಿಯ ಸಾಲುಮರಗಳಿಂದ ಬೀಳುವ ದರಳೆ ಹೆಕ್ಕಲು ಹೊರಬಿದ್ದಿದ್ದರು. ಅಡಿಗೆಗಾಗಿ ದರಳೆ ಹೆಕ್ಕಿ ಕೊಂಡೊಯ್ದು ಆಮೇಲೆ ಈ ಬಡ ಹೆಂಗಸರು ಒಡಲಪಾಡಿಗಾಗಿ ಗೇಯಲು ಬೇರೆ ಬೇರೆ ಕೆಲಸಗಳಿಗೆ ಹೋಗಬೇಕಾದುದರಿಂದ ಅವರು ಮುಂಬೆಳಕು ಹರಿಯುವಷ್ಟರಲ್ಲೇ ಮನೆಯಿಂದ ಹೊರಬೀಳಲೇ ಬೇಕಾಗಿತ್ತು. ಎಲ್ಲಿಯಾದರೂ ಒಬ್ಬಳು ಏಳುವಾಗ ಸ್ವಲ್ಪ ತಡವಾದರೆ ಅವಳ ತಳಮಳವೆಂದರೆ ಅಷ್ಟಿಷ್ಟಲ್ಲ. ಆದುದರಿಂದ ಈ ಬಡ ಹೆಂಗಸರ ಹೊಟ್ಟೆಪಾಡಿನ ಚಿಂತೆಯೇ ಅವರನ್ನು 'ಎಲಾರ್ಮ್' ಗಡಿಯಾರದಂತೆ ಹೊತ್ತಿಗೆ ಸರಿಯಾಗಿ ಎಬ್ಬಿಸಿ ಹೊರ ಗಟ್ಟುತ್ತಿತ್ತು. ಆದರೆ ಶ್ರೀಮಂತ ವರ್ಗವು ಇನ್ನೂ ಗಾಢ ನಿದ್ರಾಸಕ್ತವಾಗಿ ಹಾಸಿಗೆಯ ಮೇಲೆ ಬಿದ್ದಿತ್ತು. ಉದರಪೋಷಣೆಯ ಗೊಡವೆಯೊಂದಿಲ್ಲದಾಗ ಯಾವಾಗ ಎದ್ದರೇನು? ಅವರಿಗೇನಾದರೂ ಈ ಬಡ ಹೆಂಗಸರಂತೆ ದಿನ ಇಡೀ ದುಡಿಯಲಿಗೆಯೇ? ಇಂದು ಮುಂಜಾನೆಯೆದ್ದು ದರಳೆ ಹೆಕ್ಕದಿದ್ದರೆ ನಾಳೆ ಬೆಳಿಗ್ಗೆ ಮನೆಯಲ್ಲಿ ಹೊಗೆಯೇ ಏಳಲಾರದೆಂಬ ಚಿಂತೆಯಿದೆಯೇ?

ಶಿವಪುರದ ಬಡ ಮಜೂರ ಹೆಂಗಸರು, ಏನೇನೆಲ್ಲಾ ಊರಿನ ಸಂಗತಿಗಳನ್ನು ಮಾತಾಡುತ್ತಾ ಒಂದೊಂದಾಗಿ ಬಿದ್ದಿರುವ ಒಣ ಎಲೆಗಳನ್ನು ಬಗ್ಗಿ ಬಗ್ಗಿ ಹೆಕ್ಕುತ್ತಾ ಮುಂದುವರಿಯುತ್ತಿದ್ದರು. ಒಬ್ಬೊಬ್ಬರೊಬ್ಬರಿಗೆ ಸಿಕ್ಕಿದುದನ್ನು ಹೆಕ್ಕಿ ತೊಟ್ಟಿಯೊಳಗೆ ಹಾಕುತ್ತಿದ್ದರೇ ಹೊರತು ಎಲ್ಲವನ್ನೂ ಒಬ್ಬಳೇ ಪಡೆಯಬೇಕು; ಬೇರೆಯವರಿಗೆ ಏನೂ ಸಿಕ್ಕಬಾರದೆಂಬ ಮೇಲಾಟ, ಮತ್ಸರಗಳು ಅವರಲ್ಲಿರಲಿಲ್ಲ. ಪ್ರತಿಯೊಬ್ಬಳೂ ಸ್ವಲ್ಪ ಹೆಚ್ಚುಕಡಿಮೆ ಆಯಾ ದಿನದ ಅಡಿಗೆಗೆ ಬೇಕಾಗುವಷ್ಟರ ದರಳೆಯಿಂದ ತೃಪ್ತಳಾಗುತ್ತಿದ್ದಳು. ಒಬ್ಬಳು ಸ್ವಲ್ಪ ಹೆಚ್ಚು ಹೆಕ್ಕಿದರೆ, ಇನ್ನೊಬ್ಬಳು ತನಗೇನೂ ಸಾಲದೆಂದು ಹೇಳಿದರೆ ಹೆಚ್ಚಿಗೆಯಿದ್ದವಳು ಕಡಿಮೆಯಾದವಳಿಗೆ ಕೊಡುವಷ್ಟರ ನ್ಯಾಯ ಹಾಗೂ ಉದಾರ ಬುದ್ಧಿಯು ಈ ಬಡ ಹೆಂಗಸರಲ್ಲಿದ್ದಿತು. ಆದುದರಿಂದ ಅವರು ದರಳೆಗಾಗಿ ಒಬ್ಬರೊಬ್ಬರೊಡನೆ ಮೇಲಾಟ ಮಾಡಿಕೊಂಡು ಓಡಾಡದೆ, ಕಚ್ಚಾಡದೆ, ಬಂದುಭಾವದಿಂದ ಒಟ್ಟಾಗಿ ನಡೆಯುತ್ತಿದ್ದರು. ಹೀಗೆ ಶಿವಪುರದ ಅದೊಂದು ರಸ್ತೆಯ ಬಡ ಹೆಂಗಸರೆಲ್ಲಾ ದರಳೆ ಹೆಕ್ಕಿಕೊಂಡು ಮುಂದುವರಿಯುವಾಗ ರಸ್ತೆ ಬದಿಯಲ್ಲಿ ಲಲಿತೆಯು ಬಿದ್ದಿರುವುದನ್ನು ಕಂಡು, "ಯಾರೋ ಹೆಂಗುಸು ಸತ್ತು ಬಿದ್ದಿರುವಳು, ಯಾರೋ ಕೊಂದು ಹಾಕಿರುವರು" ಎಂದು ದಿಗಿಲುಗೊಂಡು ಕೆಲವರು, "ಹೋಗುವ ಹಿಂದೆ, ನಮಗದರ ಗೊಡವೆ ಬೇಡ ಬಡವರಿಗೆ" ಎಂದರು. ಇನ್ನು ಕೆಲವರು, "ಛೆ! ಛೆ!! ನಮಗೇನು ಹೆದರಿಕೆ? ನೋಡುವ ಸಂಗತಿಯೇನೆಂದು" ಎಂದು ಧೈರ್ಯದಿಂದ ಲಲಿತೆಯ ಬಳಿಗೆ ಶಂಕಿಸುತ್ತಾ ಹೋಗಿ ಪರೀಕ್ಷಿಸುವಾಗ ಶ್ವಾಸ ಸಂಚಾರವಾಗುವುದನ್ನು ಕಂಡು ಬಹಳ ಕನಿಕರಗೊಂಡು, "ಛೆ! ಪಾಪ! ಯಾರು ಹೊಡೆದು ಹಾಕಿದುದೋ ಏನೋ! ಎಷ್ಟು ಎಳೆ ಪ್ರಾಯದ ಹುಡುಗಿ! ಎಷ್ಟು ರೂಪವತಿ! ಯಾರಪ್ಪ ಕರುಣೆಯು ಕರುಳಿಲ್ಲದವರು ಇವಳನ್ನು ಈ ಅವಸ್ಥೆಗೀಡುಮಾಡಿದುದು!"ಎಂದು ಹೆಂಗಸರೆಲ್ಲಾ ಬಹಳ ಬೇನೆಗೊಂಡು ಲಲಿತೆಯ ಮೈಮೇಲೆಲ್ಲಿಯಾದರೂ ಪೆಟ್ಟಾದುದಾಗಲಿ ಗಾಯವಾಗಲಿ ಇರುವುದೋ ಎಂದು ಕಾಲು, ಕೈ ಮತ್ತು ಶರೀರವನ್ನೆಲ್ಲಾ ಹುಡುಕಿದರು. ಪೆಟ್ಟು, ಗಾಯಗಳೇನೂ ಇರಲಿಲ್ಲ. ಶೀರೆಗೆಲ್ಲಾ ಧೂಳು ಹಿಡಿದಿತ್ತು. ಉದ್ದ ಕೂದಲು ಬಿಚ್ಚಿಹೋಗಿ ಕೆದರಿ ಬಿದ್ದಿತ್ತು. ಕಣ್ಣು ಮುಚ್ಚಿ ಹೋಗಿತ್ತು. ಶರೀರವು ಸಂಪೂರ್ಣವಾಗಿ

ಹೀರಿಬಿಟ್ಟಂತೆ ಬಹಳ ಸೊರಗಿಹೋಗಿತ್ತು. ಮುಖದ ಸ್ವಾಭಾವಿಕ ಕಾಂತಿಯು ಮಾಯವಾಗಿ ಅದೊಂದು ಬಗೆಯ ವಿಕಟತೆಯು ನೆಲೆಗೊಂಡಿತ್ತು. "ಪಾಪ, ಎಲ್ಲಿಯೋ ರಸ್ತೆಯಲ್ಲಿ ರಾತ್ರಿಹೋಗುವಾಗ ಬಿದ್ದು ಬೋಧ ತಪ್ಪಿರಬೇಕೆ"ಂದರು ಕೆಲವು ಹೆಂಗಸರು. "ಯಾರೋ ಮರ್ಮಸ್ಥಾನಕ್ಕೆ ಪೆಟ್ಟುಕೊಟ್ಟು ಸತ್ತ ಳೆಂದು ಬಿಟ್ಟುಹೋಗಿರಬೇಕು" ಎಂದರು ಇನ್ನು ಕೆಲವರು. ಹೀಗೆ ನಾನಾ ರೀತಿ ಅಭಿಪ್ರಾಯವುಂಟಾಯಿತು ಹೆಂಗುಸರಲ್ಲಿ. ಕೆಲವರು, "ನಾವು ಹೋಗುವ ನಮಗೇಕೆ ಇದರ ಗೊಡವೆ? ಎಲ್ಲಿಯಾದರೂ ಪೋಲೀಸರು ನೋಡಿದರೆ ನಮ್ಮ ಮೇಲೆ ಬಂದೀತು ಮತ್ತೆ!" ಎಂದರು. "ಛೆ! ಎಷ್ಟಾದರೂ ಹೆಣ್ಣು ಸಂಸಾರದಲ್ಲಿ ಹುಟ್ಟಿಲ್ಲವೇ ನೀವು? ಪೋಲೀಸರು ಬಂದರೆ ನಮ್ಮನ್ನೇನು ಮಾಡುವರು? ಸ್ವಲ್ಪ ಉಪಚಾರಮಾಡಿ ಬೋಧ ಬರುವುದೋ ನೋಡುವ" ಎಂದರು ಇನ್ನು ಕೆಲವರು. ಕೆಲವರು ಲಲಿತೆಯ ವಸ್ತ್ರದ ಧೂಳು ಹಾರಿಸ ಲಾರಂಭಿಸಿದರು. ಕೆಲವರು ತಲೆಕೂದಲು ಸರಿಮಾಡಿ ಸೆರಗಿಂದ ಮುಖ ಒರಸಿದರು. ಒಬ್ಬಿಬ್ಬರು ಹತ್ತಿರದ ಮನೆಗಳಿಗೆ ನೀರು ತರಲೋಡಿದರು.

ಕಟುಕ ಸಮಾಜದ, ರಾಕ್ಷಸೀ ಮಾನವನ ಅತ್ಯಾಚಾರಕ್ಕೊಳಗಾಗಿ ಮತಿಗೆಟ್ಟು ಅನಾಥೆಯಾಗಿ ರಸ್ತೆಯ ಮೇಲೆ ಬಿದ್ದಿರುವ ನಿರ್ದೋಷಿ ಬಾಲೆ ಯೊಬ್ಬಳ ಪಾಡನ್ನು ಕಂಡು ಮರುಗಿ ಮುಂದಡಿಯಿಡಲು ಮನಸ್ಸು ಒಡಂಬಡು ವುದಿಲ್ಲವೋ ಎಂಬಂತೆ ಮಂದಾನಿಲನು ಮಂದಮಂದವಾಗಿ ಬೀಸಿದ ಕಾರಣ ಆ ತಂಪಿನಿಂದ ಲಲಿತೆಗೆ ಮೆಲ್ಲಮೆಲ್ಲಗೆ ಬೋಧೆಯುಂಟಾಯಿತು. ಅವಳು ಕಣ್ಣು ತೆರೆದಳು. ಸುತ್ತಲೂ ಕೂತು ನಿಂತು ನೋಡುತ್ತಿರುವ ಸ್ತ್ರೀಯರನ್ನು ನೋಡಿ ದಳು. ಅನಂತರ ಮೆಲ್ಲಗೆ ಕಣ್ಣು ಮುಚ್ಚಿದಳು. ಕಣ್ಣುಗಳು ಸಂಪೂರ್ಣವಾಗಿ ಪ್ರಕಾಶರಹಿತವಾಗಿದ್ದವು. ಅಷ್ಟರಲ್ಲಿ ನೀರು ತರಹೋಗಿದ್ದ ಒಬ್ಬ ಹೆಂಗಸು ಹಿಂತಿ ರುಗಿಬಂದು"ಎಂತಹ ಜನರಪ್ಪ ಇವರು! ಪ್ರಾಣಹೋಗುವಾಗ ಒಂದು ಗುಟುಕು ನೀರು ಕೊಡುವವರಲ್ಲ! ರಸ್ತೆಯಲ್ಲೊಂದು ಹೆಂಗಸು ಬೋಧ ತಪ್ಪಿಬಿದ್ದಿದೆ ಪಾಪ! ಅದಕ್ಕೆ ಮುಖಕ್ಕೆ ಹಾಕಲು ಸ್ವಲ್ಪ ನೀರುಬೇಕಾಗಿದೆ. ಸ್ವಲ್ಪ ತಂಬಿಗೆ ಕೊಡಿ. ಈಗ ಕೊಡುತ್ತೇನೆ" ಎಂದರೆ, "ಹೋಗೋಗು! ತಂಬಿಗೆ ಕೊಡಲಿ ಕ್ಕಾಗುವುದಿಲ್ಲ. ಯಾರು ನೀನು? ತಂಬಿಗೆ ವಾಪಾಸು ತರದಿದ್ದರೆ?" ಎಂದರು ಆ ಉಪ್ಪರಿಗೆ ಮನೆಯ ವಿಧವೆ ಹೆಂಗುಸೊಬ್ಬರು. ಅವರ ಮನೆ ಕೆಲಸದವ

ನಾದರೂ ಕೊಡುವುದರಲ್ಲಿದ್ದ, ಅಮ್ಮ ಕೊಡಲು ಬಿಡಲಿಲ್ಲ. ಕಡೆಗೆ ನಾನು ಕೆಲಸದವನೊಡನೆ ಸೆರಗಿಗೆ ಸ್ವಲ್ಪ ನೀರು ಹಾಕ ಹೇಳಿ ಒದ್ದೆಮಾಡಿ ತಂದೆ" ಎಂದು ಸೆರಗಿಂದ ಲಲಿತೆಯ ಮುಖವನ್ನೊರಸುವಷ್ಟರಲ್ಲಿ ಇನ್ನೊಬ್ಬ ಹೆಂಗಸು ಒಂದು ತಂಬಿಗೆ ನೀರು ಹಿಡಕೊಂಡು ಮತ್ತೊಬ್ಬಳೊಂದಿಗೆ ಬಂದು "ಇದೋ ನೀರುಂಟು ಇಲ್ಲಿ, ನೀರು ಹಾಕುವ ಮುಖಕ್ಕೆ" ಎಂದು ಲಲಿತೆಯ ಮುಖಕ್ಕೆ ನೀರುಹಾಕಿ ಸೆರಗಿಂದ ಸರಿಯಾಗಿ ವರಸಿದಳು. ಅವಳೊಂದಿಗೆ ಬಂದವಳು ನೆರೆಯ ಬಡ ಮಜೂರ ಸ್ತ್ರೀಯೊಬ್ಬಳಾಗಿದ್ದಳು. ಅವಳು ಅವಸರವಸರ ದಿಂದ ತಂಬಿಗೆ ಮತ್ತು ನೀರು ಕೊಟ್ಟುದಲ್ಲದೆ ಸಂಗತಿಯೇನೆಂದು ನೋಡಲು ತಾನಾಗಿ ಬಂದಿದ್ದಳು.

ಇಷ್ಟರಲ್ಲಿ ಲಲಿತೆಯು ಜಗ್ಗನೆದ್ದಳು. ಸುತ್ತು ಮುತ್ತಲಿರುವ ಸ್ತ್ರೀಯರ ನ್ನೆಲ್ಲಾ ಒಮ್ಮೆ ದಿಟ್ಟಿಸಿ ನೋಡಿದಳು. ಬಿಚ್ಚಿಹೋದ ತಲೆಗೂದಲನ್ನು ಕಟ್ಟುವ, ಸೀರೆ ರವಕೆಗಳನ್ನು ಸರಿಮಾಡುವ ಗೊಡವೆಗೇನೇ ಹೋಗದೆ ಕೂಡಲೆ ಅಲ್ಲಿಂದ ನಡೆದುಬಿಟ್ಟಳು. ಒಮ್ಮೆಯಾದರೂ ಹಿಂತಿರುಗಿ ಕೂಡಾ ನೋಡಲಿಲ್ಲ. ಸ್ತ್ರೀಯರೆಲ್ಲಾ ಅವಳನ್ನೇ ಕಣ್ಣು ಕಣ್ಣು ನೋಡುತ್ತಾ ನಿಂತರು. ಅವಳು ಕಣ್ಮರೆಯಾಗುವವರೆಗೂ ವಿಸ್ಮಯಗೊಂಡು ನೋಡಿದರು. ಆ ಮೇಲೆ, "ಅವಳು ಹುಚ್ಚಿ" ಎಂದರು ಕೆಲವರು. "ಹುಚ್ಚಿಯೆಂದು ಹೇಳು ವವರಿಗೆ ಹುಚ್ಚು. ಅವಳಿಗೆ ನಾಚಿಕೆಯಾಯಿತು" ಎಂದರು ಇನ್ನು ಕೆಲವರು. "ಎಲ್ಲೋ ತಲೆ ತುಂಬ ಕುಡಿದು ಬಿದ್ದಿರಬೇಕು. ಸೂಳೆಯಿರ ಬೇಕೆಂ"ದರು ಮತ್ತೆ ಕೆಲವರು. ಹೀಗೆಲ್ಲಾ ನಾನಾರೀತಿ ಮಾತಾಡಿಕೊಳ್ಳುತ್ತಾ ಅವರು ತಮ್ಮ ಕೆಲಸಕ್ಕೆ ತೊಡಗಿದರು.

ಶಿವಪುರವೆಲ್ಲಾ ಎಚ್ಚತ್ತು ತನ್ನ ಅನುನಿತ್ಯದ ಕೆಲಸಕ್ಕಾರಂಭಿಸಿದಾಗ, ಶಿವಾನಂದರ ಸೂಳೆಯಾಗಿ ಬಹಳ ಸುಖವೈಭವದಿಂದಿರುವಳೆನಿಸಿಕೊಂಡಿದ್ದ ಲಲಿತೆಯು ಬೀದಿಭಿಕಾರಿಣಿಯಾಗಿ ಅಡ್ಡಾಡುತ್ತಿದ್ದಳು. ನಿಂತಲ್ಲಿ ನಿಲ್ಲದೆ, ಕೂತಲ್ಲಿ ಕೂತುಕೊಳ್ಳದೆ ರಸ್ತೆರಸ್ತೆ, ಗಲ್ಲಿಗಲ್ಲಿ ಅಲೆದಾಡುತ್ತಿದ್ದಳು. ಬಾಯಾರಿಕೆ, ಹಸಿವು, ವಿಶ್ರಾಂತಿ, ನಿದ್ದೆಗಳ ಗೊಡವೆಯೇ ಅವಳಿಗಿದ್ದಿಲ್ಲ. ಹೆಚ್ಚಿನ ಜನರು ಭಿಕಾರಿಣಿ ಲಲಿತೆಯನ್ನು ಕಂಡು ಅತ್ಯಂತ ಕನಿಕರಪಡುತ್ತಿದ್ದರು. ವಿಶೇಷ ವಾಗಿ ಹೆಂಗಸರ ಹೃದಯ ಕರಗಿ ನೀರಾಗಿ ಹೋಗುತ್ತಿದ್ದಿತು. ಅವರು ಲಲಿತೆ

ಯನ್ನು ಮನೆಗೆ ಕರೆದು ಒತ್ತಾಯಮಾಡಿ ಕುಳ್ಳಿರಿಸಿಕೊಂಡು ಮಾತಾಡಿಸ ಲೆತ್ನಿಸುತ್ತಿದ್ದರು. ಬಾಯಾರಿಕೆಯಾಗುವುದಾದರೆ ಕುಡಿಯಲು ಮಜ್ಜಿಗೆಯೋ ಹಾಲೋ ಕೊಡುತ್ತಿದ್ದರು. ತಲೆಗೆ ಎಣ್ಣೆಹಾಕಿ ಬಾಚಿಕೊಳ್ಳ ಹೇಳುತ್ತಿದ್ದರು. ಹಣೆಗೆ ಹಾಕಲು ಕುಂಕುಮ ಮತ್ತು ಮುಡಿಯಲು ಹೂಕೊಡುತ್ತಿದ್ದರು. ಆದರೆ ಕೆಲಮಂದಿ ಗಂಡಸರು, ವಿಶೇಷವಾಗಿ ಧನಿಕ ಮಾನವಂತರೆನಿಸುವವರು ಲಲಿತೆಯೆಂದರೆ ಧಿಕ್ಕರಿಸಿ ದೂರೀಕರಿಸುತ್ತಿದ್ದರು. ಮನಬಂದಂತೆ ಬೈದು ಭಂಗಿಸುತ್ತಿದ್ದರು. ಲಲಿತೆಯು ಯಾರೇನುಮಾಡಿದರೂ ಒಂದು ಶಬ್ದ ಕೂಡಾ ಮಾತಾಡದೆ ಮೌನವಾಗಿರುತ್ತಿದ್ದಳು. ಹೃದಯ ರಹಿತ ಪುಂಡರು ಕೆಲವರು "ನೋಡಿ ಶಿವಾನಂದರ ಸೂಳೆ! ಈಗ ಬೀದಿ ಭಿಕಾರಿಣಿ" ಎಂದು ಕೈತೋರಿಸಿ ತಮಾಷೆ ಮಾಡುತ್ತಿದ್ದರು. ಲಲಿತೆಯು ಹೊರಬಿದ್ದ ಮೊದಲನೇ ದಿನದಲ್ಲಿ ಶಿವಪುರದ ಜನರಿಗೆಲ್ಲಾ ಲಲಿತೆಯನ್ನು ನೋಡುವುದೊಂದೇ ಕೆಲಸ. ಎಂತಹ ಕೆಲಸ ಬಿಟ್ಟಾದರೂ ಲಲಿತೆಯನ್ನೊಮ್ಮೆ ನೋಡದವರಿಲ್ಲ. ಅವಳು ಎಲ್ಲಿ ಆದರೂ ಸ್ವಲ್ಪ ನಿಂತರೆ ಜನರು ಗುಂಪುಕೂಡುತ್ತಿದ್ದರು. ನಡೆದುಹೋಗುವಾಗ ಸ್ತ್ರೀಪುರುಷರು ಅಂಗಡಿ ಮನೆಗಳಿಂದ ಹೊರಗೋಡಿಬಂದು ನೋಡಿ ನಾನಾ ರೀತಿ ಮಾತಾಡಿಕೊಳ್ಳುತ್ತಿದ್ದರು. ಲಲಿತೆಯು ಕೆಲದಿನಗಳ ವರೆಗೆ ಶಿವಪುರದ ಅದೊಂದು ಚೋದ್ಯವಸ್ತುವಾಗಿದ್ದಳು. ಅವಳನ್ನೆಲ್ಲಿಯಾದರೂ ಟಿಕೇಟಿಟ್ಟು ಪ್ರದರ್ಶನಕ್ಕಿಡುತ್ತಿದ್ದರೆ ಸ್ವಲ್ಪ ದುಡ್ಡು ಮಾಡಬಹುದಿತ್ತು. ಅಷ್ಟೊಂದು ಉತ್ಸುಕತೆಯಿಂದ ಶಿವಪುರಸ್ಥರು ಲಲಿತೆಯನ್ನು ಹೋದಹೋದಲ್ಲೆಲ್ಲಾ ನೋಡ ಲಾತುರಪಡುತ್ತಿದ್ದರು.

ಹೀಗೆ ಕೆಲಸಮಯ ಹೋಯಿತು. ಲಲಿತೆಯು ಶಿವಪುರದ ರಸ್ತೆ ಬೀದಿಗಳ ಸಾಮಾನ್ಯ ವಿನೋದ ವಸ್ತುವಾದಳು. ಈಗ ಕೆಲಮಂದಿ ಪೋಕ ಹುಡುಗರು ಮಾತ್ರ ಅವಳ ಬೆನ್ನು ಹಿಡಿದು ಹೋಗಿ ಅವಳ ಮೇಲೆ ಕಲ್ಲು ಬಿಸಾಡಿಯೋ, ಅವಳ ಸೀರೆಯನ್ನೆಳೆದೋ ಪೀಡೆಕೊಡುತ್ತಿದ್ದರು. ಹುಡುಗರು ಏನು ಮಾಡಿದರೂ ಲಲಿತೆಯು ಒಂದೇ ಒಂದು ಶಬ್ದವಾದರೂ ಎತ್ತುತ್ತಿದ್ದಿಲ್ಲ. ಆದುದರಿಂದ ಕಡೆಗೆ ಬೀದಿ ಹೋಕ ಹುಡುಗರ ಪೀಡೆಯೂ ನಿಂತುಹೋಯಿತು. ಲಲಿತೆಯು ಎಲ್ಲಿ ತಂಗುವಳು? ಎಲ್ಲಿ ಉಣ್ಣುವಳು? ಎಲ್ಲಿ ತಲೆಬಾಚಿ ಹೂ ಮುಡಿಯುವಳು? ಎಲ್ಲಿಂದ ಹೊಸ ಹೊಸ ಸೀರೆ ಪಡೆಯುವಳೆಂದು ಸರ್ವ

ಸಾಮಾನ್ಯವಾಗಿ ಅವಳನ್ನು ರಸ್ತೆಗಳಲ್ಲಿ ಕಾಣುವವರಾರಿಗೂ ತಿಳಿಯದೆ ಅವರು ಚೋದ್ಯಪಡುತ್ತಿದ್ದರು. ಲಲಿತೆಯಾದರೋ ಒಮ್ಮೆ ತಲೆಯೆಲ್ಲಾ ಬಿಚ್ಚಿಹಾಕಿ ಹರಿದು ಕಂತೆಯಾಗಿ ಧೂಳು ತುಂಬಿದ ವಸ್ತ್ರವುಟ್ಟುಕೊಂಡು ತಿರುಗಾಡುವಳು. ಇನ್ನೊಮ್ಮೆ ಸರಿಯಾಗಿ ತಲೆಬಾಚಿ, ಹೂಮುಡಿದು, ಒಳ್ಳೇ ವಸ್ತ್ರವುಟ್ಟು ಮೆರೆದಾಡುವಳು. ಆಗ ಹಲವರ ಕಣ್ಣು ಆ ಹುಚ್ಚಿಯ ಮೇಲೆ ಬಿದ್ದುದೂ ಉಂಟು. ಆದರೆ ಅವಳು ನಿಂತಲ್ಲಿ ನಿಲ್ಲಳು. ಈಗ ಒಂದು ರಸ್ತೆಯಲ್ಲಿದ್ದರೆ ಇನ್ನೊಂದು ಕ್ಷಣ ಇನ್ನೊಂದು ಬೀದಿಯಲ್ಲಿರುವಳು. ಮತ್ತೊಂದು ಕ್ಷಣ ಮತ್ತೊಂದು ಗಲ್ಲಿಯಲ್ಲಿರುವಳು. ತುಟಿಯೆತ್ತಿ ಒಂದು ಶಬ್ದವನ್ನೂ ಯಾರೊಡನೆಯೂ ಆಡಲಾರಳು. ಅವಳು ಮಾಡುತ್ತಿದ್ದ ಒಂದೇ ಕೆಲಸವೆಂದರೆ ಮನೆಗಳ ಹೊರ ಜಗಲಿಗಳಲ್ಲಾಗಲಿ, ರಸ್ತೆ ಬದಿಯಲ್ಲಾಗಲಿ ಚಿಕ್ಕಮಕ್ಕಳನ್ನು ಕಂಡಕೂಡಲೆ ಒಮ್ಮೆಯೇ ಹಿಡಿದೆತ್ತಿ ಮುದ್ದಾಡುವುದು. ಅವೆಷ್ಟು ಕೂಗಿದರೂ ಕೇಳದೆ ಮತ್ತೂಮತ್ತೂ ಮುದ್ದಾಡುವುದು. ಮಕ್ಕಳ ಹೆತ್ತವರೋ ರಕ್ಷಕರೋ ಓಡಿಬಂದು ಬೈದು ಭಂಗಿಸಿ ಹೊಡೆಯುವ ವರೆಗೂ ಬಿಡದೆ ಮುದ್ದಾಡುವದು. ಅವಳನ್ನು ನೋಡಿದೊಡನೆಯೇ ಚಿಕ್ಕಮಕ್ಕಳೆಲ್ಲಾ ಒಳಗೋಡುತ್ತಿದ್ದರು. ತಾಯಂದಿರು, ಚಿಕ್ಕಕೂಸುಗಳೆಲ್ಲಿಯಾದರೂ ಜಗಲಿಯಲ್ಲಿದ್ದರೆ ಒಳಗೊಯ್ಯುತ್ತಿದ್ದರು. ತಾವು ಹಿಡಕೊಂಡಿದ್ದರೂ ಒಳಗೊಯ್ದು ಬಿಡುತ್ತಿದ್ದರು. ಯಾಕಂದರೆ ತಾಯಂದಿರಾಗಲಿ ಯಾರೇ ಆಗಲಿ ಹಸುಗೂಸುಗಳನ್ನು ಹಿಡಕೊಂಡಿದ್ದಂತೆಯೇ ಲಲಿತೆಯು ಒಂದೇ ಸವನೆ ಓಡಿಬಂದು ಮುದ್ದಾಡಿದುದುಂಟು. ಆದಕ್ಕಾಗಿ ಅನೇಕ ಸಲ ಮನೆಗಂಡಸರಿಂದ ಪೆಟ್ಟುತಿಂದಿದ್ದಳು. ಹೀಗಾಗಿ ಲಲಿತೆಯು ಶಿವಪುರದ ಮಕ್ಕಳಿಗೆ 'ಗುಮ್ಮ'ವಾದಳು. ಮಕ್ಕಳೇನಾದರೂ ಅತ್ತರೆ ಹೆತ್ತವರಾಗಲಿ, ಚಾಕರಿಯವರಾಗಲಿ "ಭಿಕಾರಿಣಿ ಬಂದಳು ಭಿಕಾರಿಣಿ'! ಇದೋ ಭಿಕಾರಿಣಿಗೆ ಕೊಡುತ್ತೇನೆ ನಿನ್ನನ್ನು ನೋಡು!" ಎಂದು ಬೆದರಿಸುತ್ತಿದ್ದರು. ಆಗ ಎಂತಹ ಅಳುವ ಮಕ್ಕಳಾದರೂ ಒಮ್ಮೆ ಸುಮ್ಮನಾಗುತ್ತಿದ್ದುವು.

—: ಸಂಪೂರ್ಣ :—

ಸ್ಥಾಪನೆ: 1930

# ತೊದಲ್ನುಡಿ ಗ್ರಂಥಮಾಲೆ

ಪ್ರಮೋದೂತ ವಿಜಯದಶಮಿ

**ಪ್ರಾರ್ಥನೆ**—ಸಾಹಿತ್ಯಗಳ ಮೇಲಾಟದ ಕಾಲವಿದು. ಕನ್ನಡವೂ ಅವುಗಳ ಸಹಪಂಕ್ತಿಯಲ್ಲಿ ತಲೆಯೆತ್ತಿ ನಿಂತು ಸ್ಪರ್ಧಿಸಲೆಂದು ಹಿರಿಯರ ಪ್ರಯತ್ನ. ಅವರ ಪ್ರಯತ್ನದಲ್ಲಿ ತುಸು ಬೆಂಬಲದ ಸೇವೆಯನ್ನು ಮಾಡಬೇಕೆಂದು 'ಕಿರಿಯರ' ಭಾವನೆ. ಈ ಭಾವನೆಯೇ ದೈವಪ್ರೇರಣೆಯಿಂದ **'ಕಿರಿಯರ ಪ್ರಪಂಚ'**ವಾಗಿ ತಲೆಯೆತ್ತಿರುವುದು.

ಸಮಾಜದ ಏರಿಳಿಕೆಗಳು ಅದರ ಆಚಾರದಲ್ಲಡಕವಾಗಿವೆ; ಆಚಾರದ ಒಳಿತು ಹೀನತೆಗಳು ವಿಚಾರದ ಕೈಯೊಳಗಿವೆ. ಇಂತಹ ಸುವಿಚಾರದ ಪಡಿಯಚ್ಚುಗಳನ್ನು ಸಾಧ್ಯವಾದ ಮಟ್ಟಿಗೆ ಸಂಗ್ರಹಿಸಿ ಸಮಾಜದ ಮುಂದಿಡುವುದೇ 'ಕಿರಿಯರ ಪ್ರಪಂಚ'ದ **'ತೊದಲ್ನುಡಿ'** ಗ್ರಂಥಮಾಲೆಯ ಹಿರಿ ಗುರಿ. ಮಾಲೆಯಲ್ಲಿ ಈ ಪಡಿಯಚ್ಚುಗಳು ಕಥೆ, ಕಾದಂಬರಿ, ಕವನ, ನಾಟಕಾದಿಗಳ ರೂಪದಲ್ಲಿ ಹೊರಬೀಳುವವು. ಈ ನಮ್ಮ ಕಾರ್ಯದಲ್ಲಿ ಭಾಷಾಭಿಮಾನಿಗಳೂ ದೇಶಾಭಿಮಾನಿಗಳೂ ಕೈಕೊಟ್ಟು ಸಹಕರಿಸಿ ನಮ್ಮಿಂದ ಸೇವೆಯನ್ನು ಮಾಡಿಸಿಕೊಳ್ಳಬೇಕಾಗಿ ಪ್ರಾರ್ಥನೆ. ಸಂಘವು ಈ ಕೆಳಗಿನಂತೆ ಸಹಾಯವನ್ನಪೇಕ್ಷಿಸುತ್ತದೆ.

೧ **ಸ್ಥಾಪಕರು**—ಗ್ರಂಥಮಾಲೆಗೆ ರೂ. ೫೦ ಯಾ ಹೆಚ್ಚು ಕೊಟ್ಟವರು. ಇವರಿಗೆ ಕೊನೆಯ ವರೆಗೂ ಗ್ರಂಥಮಾಲೆಯ ಗ್ರಂಥಗಳನ್ನು ಕೊಡುವೆವಲ್ಲದೆ ಆ ಎಲ್ಲಾ ಗ್ರಂಥಗಳಲ್ಲಿಯೂ ಇವರ ಹೆಸರನ್ನು ಪ್ರಕಟಿಸುವೆವು

೨ **ರಕ್ಷಕರು**—ರೂ. ೨೫ ಕೊಟ್ಟವರು. ಇವರಿಗೆ ಕೊನೆಯ ವರೆಗೂ ಗ್ರಂಥಗಳನ್ನು ಕೊಡುವೆವು. ೧೫ ಗ್ರಂಥಗಳಲ್ಲಿ ಹೆಸರನ್ನು ಪ್ರಕಟಿಸುವೆವು.

೩ **ಆಶ್ರಯದಾತರು**—ರೂ. ೧೦ ಕೊಟ್ಟವರು. ಇವರಿಗೆ ೧೦ ವರ್ಷಗಳ ವರೆಗೆ ಗ್ರಂಥಗಳನ್ನು ಕೊಡುವೆವು. ೧೦ ಗ್ರಂಥಗಳಲ್ಲಿ ಹೆಸರನ್ನು ಪ್ರಕಟಿಸುವೆವು

೪ **ಪೋಷಕರು**—ರೂ. ೫ ಕೊಟ್ಟವರು. ಇವರಿಗೆ ೫ವರ್ಷಗಳ ವರೆಗೆ ಗ್ರಂಥಗಳನ್ನು ಕೊಡುವೆವು. ೫ ಗ್ರಂಥಗಳಲ್ಲಿ ಹೆಸರನ್ನು ಪ್ರಕಟಿಸುವೆವು.

೫ **ಚಂದಾದಾರರು**—ಆರಂಭದಲ್ಲಿ ರೂ. ೧ ಪ್ರವೇಶಧನವಿತ್ತು ಗ್ರಂಥಮಾಲೆಯ ಎಲ್ಲ ಗ್ರಂಥಗಳನ್ನು ಪಡೆಯುವವರು. ಇವರಿಗೆ $\frac{3}{4}$ ಬೆಲೆಗೆ ಗ್ರಂಥಗಳು ಕೊಡಲ್ಪಡುವವು.

ಕಾರ್ಯದರ್ಶಿ.

**ಉಡುಪಿ.** **ಕಿರಿಯರ ಪ್ರಪಂಚ.**

## ಗ್ರಂಥಮಾಲೆಯ ರಕ್ಷಕರು

೧ ಶ್ರೀಯುತ ಪಾಂಗಾಳ ಲಕ್ಷ್ಮೀನಾರಾಯಣ ನಾಯಕರು, ಕಟಪಾಡಿ.
೨ ಶ್ರೀಯುತ ಕೆ. ಸುಬ್ರಾಯ ಚರ್ಡಪ್ಪ ಶ್ಯಾನುಭಾಗರು, ಕಟಪಾಡಿ.
೩ ಮೆಸ್ಸರ್ಸ್ ಮಲ್ಪೆ ವಾಮನ ಭಟ್ ಎಂಡ್ ಬ್ರದರ್, ಉಡುಪಿ.

---

## ಆಶ್ರಯದಾತರು

೧ ಶ್ರೀ. ಅಂಬಾಡಿಬೀಡು ಗೋಪಾಲ ಶೆಟ್ಟರು, ಕಟಪಾಡಿ.
೨ ,, ತೋನ್ಸೆ ಜನಾರ್ದನಯ್ಯನವರು, ಉಡುಪಿ.
೩ ,, ಪಿ. ರಾಮದಾಸ ನಾಯಕರು, ಬಿ. ಎ., ಎಲ್. ಟಿ. ಕಟಪಾಡಿ.
೪ ,, 'ಕಾಮತ್' ಅವರು ಕಟಪಾಡಿ.
೫ ,, ಕೆದಿಂಜೆ ವೆಂಕ್ಟಯ್ಯ ಹೆಗ್ಡೇರು, ಜಮೀನ್ದಾರ್, ಯೇಣಗುಡ್ಡೆ.
೬ ,, ಕೆ. ಸೀತಾರಾಮ ದೊರೆ ಬಲ್ಲಾಳರು, ಕಟಪಾಡಿ ಬೀಡು.
೭ ,, ಎ. ಬಿ. ಶೆಟ್ಟರು, ಎಂ. ಎಲ್. ಸಿ. ಅತ್ತಾವರ, ಮಂಗಳೂರು.
೮ ,, ಕೆ. ವಾಸುದೇವ ಚರ್ಡಪ್ಪ ಶ್ಯಾನುಭಾಗರು, ಕಟಪಾಡಿ.
೯ ಮೆಸ್ಸರ್ಸ್ ಪಿ. ಎ. ಪೈ ಬ್ರದರ್ಸರವರು, ಉಡುಪಿ.
೧೦ ಶ್ರೀ ಯು. ಸದಿಯನವರು, ಜಮೀನ್ದಾರ್, ಉದ್ಯಾವರ.
೧೧ ,, ಬಿ. ವಾಸುದೇವ ರಾಯರು, ಎಡ್ವೋಕೇಟ್, ಉಡುಪಿ.
೧೨ ,, ಕೆ. ಮುದ್ದಣ್ಣ ಶೆಟ್ಟರು, ಹೆಡ್‌ಮಾಸ್ಟರ್, ಕೊರಂಗ್ರಪಾಡಿ.
೧೩ ,, ಎಂ. ವಾಮನ ರಾಯರು, ಎಪೊಲೋ ಸ್ಟ್ರೀಟ್, ಬೊಂಬಾಯಿ.
೧೪ ,, ಪಿ. ರಾಮಚಂದ್ರರಾಯರು, M.B. & B. S. Ph. D. ವಿಶಾಖಪಟ್ಣ
೧೫ ,, ಎ ಬಿ ಕೃಷ್ಣರಾಜರು, ಉಡುಪಿ.
೧೬ ,, ಪಾದೂರು ಕೃಷ್ಣಯ್ಯ ಶೆಟ್ಟರು, ಪರೇಲ್, ಬೊಂಬಾಯಿ.
೧೭ ,, ಯು. ವೆಂಕಟರಾಯ ಕಾಮತರು, ಉಡುಪಿ.
೧೮ ,, ಪಿ. ಎನ್. ಬನ್ನಂಜೆ ರಾಮಾಚಾರ್ಯರು, ಉಡುಪಿ.

---

## ಪೋಷಕರು

೧ ಶ್ರೀ ಕೆ. ರಾಮ ಕಾಮತರು, ಮರ್ಚಂಟ್, ಕಟಪಾಡಿ.
೨ ,, ನಂದ್ಯಪ್ಪ ಹೆಗ್ಡೇರು, ಯೇಣಗುಡ್ಡೆ.

೩ ಶ್ರೀ. ಕೆ. ಕೃಷ್ಣಯ್ಯ ಶೆಟ್ಟರು, ಪಡುಮನೆ, ಕೆಮ್ಮುತ್ತೂರು.
೪ ,, ಕೆ. ನಾರಾಯಣ ಶೆಟ್ಟರು, ಜಮೀನ್ದಾರ್, ಕೊರಂಗ್ರಪಾಡಿ.
೫ ,, ಯು. ಪರಮೇಶ್ವರ ಮೇಸ್ತ್ರರು, ಫಿಜಿಸಿಯನ್, ಉದ್ಯಾವರ.
೬ ,, ಪುತ್ತಿಗೆ ಸುಬ್ಬಣ್ಣಾಚಾರ್ಯರು, ಉದ್ಯಾವರ ಕುದುರು.
೭ ,, ಬೆಳ್ಕಳೆ ಕೆರೆಮನೆ ವೆಂಕಪ್ಪ ಶೆಟ್ಟರು, ಉಡುಪಿ.
೮ ,, ಕುತ್ಪಾಡಿ ತಿಮ್ಮಪ್ಪ ಶೆಟ್ಟರು, ಉಡುಪಿ.
೯ ,, ಬೆಳ್ಕಳೆ ಕೆರೆಮನೆ ನಾರಾಯಣ ಶೆಟ್ಟರು, ಉಡುಪಿ.
೧೦ ,, ಕೊರಂಗ್ರಪಾಡಿ ತೇಜಪ್ಪ ಶೆಟ್ಟರು, ಉಡುಪಿ.
೧೧ ,, ಕವಿರಾಜ ಮಹಾಬಲ ಶೆಟ್ಟರು, ಮಂಗಳೂರು.
೧೨ ಶ್ರೀಮತಿ ಮಂದಾಕಿನಿ ಬಾಯಿಯವರು, ವಿದುಷಿ, ಮದ್ರಾಸು.
೧೩ ,, ನೇತ್ರಾವತಿ ಕೆ. ಶೆಟ್ಟಿ, ಉಡುಪಿ.
೧೪ ಶ್ರೀ ಎಂ. ಪದ್ಮನಾಭ ರಾಯರು, ಜಮೀನ್ದಾರ್, ಮಟ್ಟು.
೧೫ ,, ಯು. ರಾಮಚಂದ್ರ ಮಯ್ಯರು, ಅಧ್ಯಾಪಕ, ಉದ್ಯಾವರ.
೧೬ ,, ಎಂ. ವಿಟ್ಠಲ ಶೆಟ್ಟರು, ಅಧ್ಯಾಪಕ, ಮಲ್ಲಾರು.
೧೭ ,, ಕೆ. ಶೇಸು ಶೆಟ್ಟರು, ಅಧ್ಯಾಪಕ, ಕಾಪು.
೧೮ ,, ಪಿ. ಮುದ್ದಣ್ಣ ಶೆಟ್ಟರು, ಬಿ. ಯಂ. ಸ್ಕೂಲ್, ಪಾದೂರು.
೧೯ ,, ಯು. ದಾದು, ಹೆಡ್‌ಮಾಸ್ಟರ್, ಕೈಪುಂಜಾಲ್
೨೦ ಮಿ. ಯಫ್. ಯಕ್ಸ್. ದಾಲ್ಮೇದರು, ಉದ್ಯಾವರ.
೨೧ ಶ್ರೀ ಪಾಂಗಾಳ ಜನಾರ್ದನ ನಾಯಕರು, ಕಟಪಾಡಿ.
೨೨ ,, ಬಾಳ್ಕಟ್ಟಬೀಡು ಕೃಷ್ಣಯ್ಯ ಹೆಗ್ಡೇರು, ಡಿ. ಬೋ. ಮೆಂಬರ್.
೨೩ ,, ಪಿ. ಆನಂದ ನಾಯ್ಕರು, ಮರ್ಚಂಟ್, ಕಟಪಾಡಿ.
೨೪ ,, ಎಲ್ಲೂರು ಗುತ್ತು ಅಚ್ಚಣ್ಣ ಶೆಟ್ಟರು, ವೈನಾಡ್.
೨೫ ,, ಕೆ. ಪದ್ಮನಾಭ ಶ್ಯಾನುಭಾಗರು, ಹೆ. ಮಾ. ಕರಂದಾಡಿ.
೨೬ ,, ಮಟ್ಪಾಡಿ ಶೀನಪ್ಪ ಶೆಟ್ಟರು, ಟೀಚರ್, ಬಾರ್ಕೂರು.
೨೭ ,, ಬೈಕಾಡಿ ರಾಮಣ್ಣ ಶೆಟ್ಟರು, ಅಧ್ಯಾಪಕ, ಬಾರ್ಕೂರು.
೨೮ ,, ಪೆರಂಪಳ್ಳಿ ಶೀನಪ್ಪ ಶೆಟ್ಟರು, ಟೀಚರ್, ಉಡುಪಿ.
೨೯ ,, ಹೆಗ್ಗ ವಿಟ್ಠಲ ಶೆಟ್ಟರು, ಅಧ್ಯಾಪಕ, ಬಡಗಬೆಟ್ಟು.
೩೦ ,, ವೈ. ಶ್ಯಾಮರಾಯ ಹೆಗ್ಡೇರು, ಜಮೀನ್ದಾರ್, ಯೇಣಗುಡ್ಡೆ.
೩೧ ,, ಎಂ. ನಾರಾಯಣ ಶೆಟ್ಟರು, ಟೀಚರ್, ಮರ್ಣೆ.

೩೨ ಶ್ರೀ ವೈ. ಅಂಗರ ಶೆಟ್ಟರು, ಅಧ್ಯಾಪಕ, ಎರ್ಮಾಳ್.
೩೩ ,, ವೈ. ತಬ್ರ ಶೆಟ್ಟರು, ಅಧ್ಯಾಪಕ, ಎರ್ಮಾಳ್.
೩೪ ,, ಯು. ನಾಗಪ್ಪ, ಫಿಶ್ಯರೀಸ್ ಇನ್ಸ್‌ಪೆಕ್ಟರ್, ಮಂಗಳೂರು.
೩೫ ,, ಪಿ. ವಿಟ್ಠಲ ಶೆಟ್ಟರು, ಅಧ್ಯಾಪಕರು, ಉಡುಪಿ.
೩೬ ,, ಅಂಬಾಡಿಬೀಡು ಸೂರ್ಯಣ್ಣ ಶೆಟ್ಟರು, ಬೊಂಬಾಯಿ.
೩೭ ,, ಎಂ. ಎಸ್. ಅಧಿಕಾರಿಗಳು, ಪ್ಲೀಡರ್, ಕಾರ್ಕಳ.
೩೮ ,, ಪಿ. ವಿ. ಉಪಾಧ್ಯಾಯರು, ವಕೀಲ್, ಕಾರ್ಕಳ.
೩೯ ,, ಕೆ. ಎಂ. ಹೆಗ್ಡೇರು, ವಕೀಲ್, ಕಾರ್ಕಳ.
೪೦ ,, ಕಟಪಾಡಿ ರಂಗಪ್ಪ ಕಿಣಿಯರು, ಬೊಂಬಾಯಿ.
೪೧ ಡಾಕ್ಟರ್ ಯು. ಎಸ್. ರಾವ್. ಬೊಂಬಾಯಿ
೪೨ ಶ್ರೀ ಕೆ. ವಿ. ಹೆಬ್ಬಾರ್, ಕಟ್ಟಂಗೆರೆ.
೪೩ ,, ವಿ. ವಿ. ಕಾಣೇಮಾರ್, ವೆಲ್‌ಕಂ ಹೋಟೆಲ್, ಬೊಂಬಾಯಿ.
೪೪ ,, ಎಚ್. ವೀರಯ್ಯ ನಾಯ್ಕರು, ಅಧ್ಯಾಪಕ, ಕಾಪು.
೪೫ ,, ವಿ. ತುಕ್ರ ಶೆಟ್ಟರು, ಅಧ್ಯಾಪಕ, ಕನ್ಯಾನ, ಪುತ್ತೂರು.
೪೬ ,, ಪಿ. ಮಹಾಲಿಂಗ ಶೆಟ್ಟರು, ಅಧ್ಯಾಪಕ, ಕಾಪು.
೪೭ ,, ಬಿ. ವೆಂಕಪ್ಪ ರೈಗಳು, ಜಮೀನ್ದಾರ್, ಉಪ್ಪಿನಂಗಡಿ.
೪೮ ,, ಕುತ್ಯಾರು ರಾಮಣ್ಣ ಶೆಟ್ಟರು, ಕೇಂಜ ಕೆರೆಮನೆ, ಬೊಂಬಾಯಿ.
೪೯ ,, ದೇಜಪ್ಪ ಸಿ. ಅಮೀನ್, ಕೈಪುಂಜಾಲ್.
೫೦ ,, ಕೆ. ಸಂಜೀವ ಶೆಟ್ಟರು, B. A., L. T ಉಡುಪಿ.
೫೧ ,, ಅಡ್ವೆ ಕುಂಜರೈಮನೆ ರುಕ್ಕ ಶೆಟ್ಟರು, ಬೊಂಬಾಯಿ.
೫೨ ,, ಬೆಳ್ಮಣ್ಣು ಸೂರಪ್ಪ ಶೆಟ್ಟರು, ಪರೇಲರೋಡು, ಬೊಂಬಾಯಿ.
೫೩ ,, ನರ್ಸು ಶೆಟ್ಟರು, ಅಡ್ವೆ ಕಂಕಣಗುತ್ತು, ಬೊಂಬಾಯಿ.
೫೪ ,, ನಾಗಪ್ಪ ಶೆಟ್ಟರು. ಬೋ. ಹಾ. ಎ. ಶಾಲೆ, ಎರ್ಮಾಳು.
೫೫ ,, ಬಿ. ಭೋಜರಾಯರು, ಮೂಲ್ಕಿ.
೫೬ ,, ಶಂಕರ ಜ್ಯೋತಿಷಿ, ಚೆಂಡಿಯೆ.
೫೭ ,, ಕೆ. ಗಣೇಶ ಸುಬ್ಬಪ್ಪಯ್ಯ, ಪ್ರೆಸಿಡೆಂಟ್, ಪಂ. ಬೋ. ಬೆಳ್ಳಾರೆ.
೫೮ ,, ಕೆ. ರಾಮಚಂದ್ರ ಶೆಟ್ಟಿ, ಹೊಸಮನೆ, ಕಡೇಕಾರು, ಉಡುಪಿ.
೫೯ ,, ಪಿ. ಜಿ. ವೆಂಕಟ್ರಮಣ ಚಡ್ಗರು, ಪಟೇಲ್, ಸಾಂಡೇಶ್ವರ.

ಮೇಲಿನ ಮಹಾಶಯರೆಲ್ಲರಿಗೂ 'ಕಿರಿಯರ ಪ್ರಪಂಚ'ವು ಕೃತಜ್ಞತೆಯನ್ನರ್ಪಿಸುತ್ತದೆ, ಇತರರೂ ಇದೇ ರೀತಿ ಪ್ರೋತ್ಸಾಹಿಸಬೇಕಾಗಿ ವಿನಂತಿ.

ಕಾರ್ಯದರ್ಶಿ.

# ತೊದಲ್ನುಡಿ ಗ್ರಂಥಮಾಲೆಯ ಪುಸ್ತಕಗಳು
## ಮತ್ತು ಅವುಗಳ ಕುರಿತು ಅಭಿಪ್ರಾಯಗಳು.

## ಸ್ವತಂತ್ರ ಜೀವನೋಪಾಯ (ತೃತೀಯಾವೃತ್ತಿ)ಬೆಲೆಂ—೨—೬

ಜೀವನದ ಹೋರಾಟವನ್ನು ಕಣ್ಣ ಮುಂದಿರಿಸಿ ಸ್ವತಂತ್ರಜೀವನ ನಡೆಸುವ ವಿಧಾನವನ್ನು ವಿವರಿಸುವ ಚಿಕ್ಕ ಪುಸ್ತಕ.

(ಮದರಾಸು, ಬೊಂಬಾಯಿ, ಮೈಸೂರು ಟೆಕ್ಸ್ಟ್‌ಬುಕ್ ಕಮಿಟಿಗಳಿಂದ ಮಂಜೂರಾಗಿದೆ)

'ಉಡುಪಿಯ ಕೆಲವು ಉತ್ಸಾಹೀ ತರುಣರು ಕೂಡಿ 'ತೊದಲ್ನುಡಿ ಗ್ರಂಥಮಾಲೆ'ಯೆಂಬುದನ್ನು ಹೊರಡಿಸಿರುವರು. ಅದರ 'ಮೊದಲನುಡಿ'ಯಿದು. ನಾಟಕೆಯ ರೂಪದಲ್ಲಿ ಬರೆಯಲಾಗಿದೆ...ಸಂವಾದದಲ್ಲೆಲ್ಲ ಪ್ರತಿಯೊಂದು ದೃಶ್ಯದಲ್ಲಿ, ಗಾದೆಗಳೂ ನಾನಾ ಉಪಮೆಗಳು ಅವಿರಳವಾಗಿ ಪೋಣಿಸಲ್ಪಟ್ಟಿವೆ. ಶೈಲಿಯು ಚಲೋದಿದೆ. ಇವರ ನುಡಿಗಳು ಹೆಚ್ಚಿ, 'ಕಿರಿಯರ ಪ್ರಪಂಚ'ವು ಹಿರಿದೆನಿಸಲೆಂದು ಹಾರೈಕೆ.' —ಕಂಠೀರವ

'ಈಗಣ ನಿರುದ್ಯೋಗ, ದುಂದುಗಾರಿಕೆ, ಸಾಲಗಾರಿಕೆ ಮೊದಲಾದ ಪರೋಪಜೀವನಗಳಿಗೆ ಜನರು ಬಲಿಬೀಳದೆ, ಬೇರೆ ಬೇರೆ ವೃತ್ತಿಗಳಲ್ಲಿ ನಿರತರಾಗಿ, ಸ್ವಾಭಿಮಾನದಿಂದ ಸ್ವತಂತ್ರ ಜೀವನ ನಡೆಸುವಂತೆ ಚತುರ ಶಿಕ್ಷಿತ ತರುಣರು ಹಳ್ಳಿಗಳ ಸಂಘಟನಾಕಾರ್ಯವನ್ನು ಕೈಕೊಂಡು ಯಾವ ರೀತಿಯಲ್ಲಿ ಕೆಲಸಮಾಡಬೇಕೆಂಬ ಆದರ್ಶವನ್ನು ಈ ಚಿಕ್ಕ ವಹಿಯಲ್ಲಿ ನಿರ್ದೇಶಿಸಲಾಗಿದೆ. ಕರ್ನಾಟಕದ ಹಿರಿಯರ ಸಾಹಿತ್ಯ ಸೇವೆಗೆ ಬೆಂಬಲವೀಯಬೇಕೆಂಬ ಈ 'ಕಿರಿಯರ ಪ್ರಪಂಚ'ದ ಹಿರಿದಿಚ್ಛೆಯು ತಕ್ಕ ಆಶ್ರಯ ಪ್ರೋತ್ಸಾಹ ದೊರೆತು ಸಾರ್ಥಕವಾಗಿ, ಕಿರಿಯರು ಹಿರಿಯರಾಗಿಯೇ ಮೆರೆವಂತಾಗಲೆಂದು ಹಾರೈಕೆ.' —ನವಯುಗ.

## ಸಂಶಯ ಪಿಶಾಚಿ (ತೃತೀಯ ಮುದ್ರಣ) ಬೆಲೆ ೦—೬—೦

(ಮದರಾಸು, ಬೊಂಬಾಯಿ, ಮೈಸೂರು ಟೆಕ್ಸ್ಟ ಬುಕ್ ಕಮಿಟಿಗಳಿಂದ ಮಂಜೂರಾಗಿದೆ.)

ಅಳಿಯ ಸಂತಾನಕಟ್ಟಿನ, ಮುಖ್ಯವಾಗಿ ಬಂಟ ಸಮಾಜದ ಸದ್ಯದ ನಡನಳಿಗೆಯನ್ನೂ ಅದರಿಂದುಂಟಾಗುವ ದುಷ್ಪರಿಣಾಮಗಳನ್ನೂ ಚಿತ್ತವೇದಕವಾಗಿ ಚಿತ್ರಿಸಿ ಸಮಾಜದೇಳಿಗೆಯ ಮಾರ್ಗವನ್ನು ಸೂಚಿಸುವ ನಾಟಕವಿದು.

'ಇದೊಂದು ಸಾಮಾಜಿಕ ನಾಟಕೆ. ಇದರಲ್ಲಿ ವಾಸ್ತವಿಕ ಸ್ಥಿತಿಗತಿಯೇ ಚಿತ್ರಿತವಾಗಿದ್ದು ಮಂಗಳೂರೇ ಕಥಾಕ್ಷೇತ್ರವಾಗಿದೆ. ಪಾತ್ರಗಳ ಸಂಭಾಷಣೆಯ ಪ್ರತಿ ಶಬ್ದವೂ ಭಾವಭರಿತವಾಗಿರುತ್ತದೆ. ಇದು ಆಧುನಿಕ ಶೈಲಿಯಿಂದ ಮನೋರಂಜಕವಾಗಿದೆ. ಪೂರ್ವಾಚಾರ ವಿಚಾರಗಳೆಂಬ ಪ್ರೇತಬಾಧೆಯಿಂದ ನಮ್ಮ ಸಮಾಜವು ದಿನೇ ದಿನೇ ಅಧಃಪತನ ಹೊಂದುತ್ತಿರುವ ಕಾಲದಲ್ಲಿ ಇಂತಹ ಪುಸ್ತಕಗಳು ಹೊರಬೀಳುವುದು ಶುಭಚಿಹ್ನೆಯಾಗಿದೆ. ಎಲ್ಲರೂ ಓದಿ ಪ್ರೋತ್ಸಾಹಿಸಬೇಕು.' ಸ್ವದೇಶಾಭಿಮಾನಿ (ಸಾ. ಸಂಚಿಕೆ)

## OPINION OF THE 'HINDU' MADRAS

**KAVYA SAMRAJYA:**—*Published by* **Kiriyara Prapancha, Udipi.**

PRICE 0—12—0

When the country is in the throes of a new awakening, every attempt to advance the notion's cause should be welcomed. The national edifice, to be lasting, has to be built on the sure foundation of culture. When so many modern thoughts, some of an alien origin, are seemingly in conflict with established traditions of the country the need for directing young mind, in the proper direction becomes all the more pressing. The book uuder review is a collection of poems written by various authors of the Kannada speaking portion of the country. The topics are varied. Some of the compositions offer light reading, while others are thought-provoking; but through all there runs the spirit of awakened India, with a nationalistic outlook on life, and great love for the country; its language and culture. Kiriyara Prapancha has chosen the poems carefully and though the poets are modern and young, the work is such as to appeal to young and old alike.

'...ಆಧುನಿಕ ಕವಿಗಳ ಕವನಗಳ ಸಂಗ್ರಹವಿದು, ಉತ್ಸಾಹಿಗಳಾದ 'ಕಿರಿಯರು' ಮಾಡಿದ ಸಾಹಸವನ್ನು ನೋಡಿ ಕೌತುಕವೆನಿಸಿತು.' —ಜಯಕರ್ನಾಟಕ.

'...ಗ್ರಂಥವೂ ಒಳಗಿನ ವಿಷಯವೂ ಎರಡೂ ಅಂದವಾಗಿವೆ. ತಮ್ಮ ಸಾಹಿತ್ಯ ಸೇವೆ ಯಶಸ್ವಿಯಾಗಿ ಮುಂದುವರಿಯಲೆಂದು ಹಾರೈಸುತ್ತೇನೆ.' —ತಿ. ನ. ಶ್ರೀಕಂಠಯ್ಯ.

'ಒಳಗೂ ಹೊರಗೂ 'ಸಾಮ್ರಾಜ್ಯ'ವು ಅಂದವಾಗಿದೆ. ಎಲ್ಲ ಭಾಗಗಳ ಕವಿಗಳ ಕೃತಿಗಳು ಪ್ರಾತಿನಿಧಿಕವಾಗಿ ಅದರಲ್ಲಿ ಬಂದು ನಿಂತಿವೆ...ಅತ್ಯಂತ ಸ್ತುತ್ಯವಾಗಿದೆ.'—ವಿ. ಕೃ ಗೋಕಾಕ.

'...ಕಾವ್ಯಸಾಮ್ರಾಜ್ಯ'ವು ಕನ್ನಡ ಆಧುನಿಕ ಸಾಹಿತ್ಯಕ್ಕೆ ರತ್ನಪ್ರಾಯವಾಗಿದೆ.

—ಡಾ. ಟಿ. ಮಾಧವ ಪೈ, M. B. & B. S.

'...ಕಾವ್ಯಸಾಮ್ರಾಜ್ಯದಲ್ಲಿ ವಿಶ್ವಕರ್ನಾಟಕದೊಳಗಿನ ಬಹುಶಃ ಎಲ್ಲಾ ಪ್ರಮುಖ ಕವಿಗಳ ಕವನಗಳ ಆಯ್ಕೆಯೊಂದನ್ನು ಕೊಡುವ ಪ್ರಯತ್ನ ಮಾಡಲಾಗಿದೆ...ಅದರ ಬಾಹ್ಯಾಂಗವು ನಯನ ಮನೋಹರವಾಗಿರುವಂತೆಯೇ ಅಂತರಂಗವೂ ಚೇತೋಪಹಾರಿಯಾಗಿದೆ.

ಹನುಮಂತರಾವ್ ಮಾಂಜರೇಕರ, B. A. (ಕಾನಡಾವೃತ್ತದಲ್ಲಿ)

'...ಕವಿತೆಗಳ ಸವಿಯನ್ನುಣ್ಣಬೇಕಾದರೆ 'ಕಾವ್ಯಸಾಮ್ರಾಜ್ಯ'ವನ್ನೇ ಹೊಕ್ಕು ನೋಡಬೇಕು; ತರಿಸಿ ಓದಬೇಕು. ಈ ಸರ್ವ ಶ್ಲಾಘನೀಯ ಯತ್ನವನ್ನು ಪ್ರೋತ್ಸಾಹಿಸದಿದ್ದರೆ ಮತ್ತಾವುದನ್ನು?

—ಬಡವರ ಬಂಧು.

'...ಕರ್ನಾಟಕದ ಎಲ್ಲಾ ಪ್ರಾಂತ್ಯಗಳ ಕವಿಗಳ ಕೃತಿಗಳೂ ಇಲ್ಲಿ ಆಯ್ದು ಸೇರಿಸಲ್ಪಟ್ಟಿವೆ. ಕಥಕ, ವರ್ಣಕ, ಭಾವೋದ್ಯೋತಕವಾದ ಎಲ್ಲಾ ಬಗೆಯ ಕವಿತೆಗಳೂ ಸೇರಿವೆ...'

—ಪ್ರಬುದ್ಧ ಕರ್ಣಾಟಕ.

'...ಕವಿಕುಲ ತಿಲಕರ ಕವನಗಳನ್ನು ಪೋಣಿಸಿ ಈ 'ಕಾವ್ಯಸಾಮ್ರಾಜ್ಯ'ವೆಂಬ ಮಾಲೆಮಾಡಿ 'ಕಿರಿಯರ ಪ್ರಪಂಚ'ವು ಕನ್ನಡಿಗರ ಕೊರಳಿಗೆ ಹಾಕಿರುವುದು. ಕವಿತಾ ವಾಚಕ ವರ್ಗವು ಅದರ ಸುಗಂಧವನ್ನಾಘ್ರಾಣಿಸಿ ಆನಂದಿಸದಿರದು. ಸುಲಭ ಬೆಲೆಗೆ ಇಂತಹ ಉಚ್ಚ ಸಾಹಿತ್ಯವನ್ನೊದಗಿಸುತ್ತಿರುವ ಪ್ರಪಂಚಕ್ಕೆ ಹಿರಿಯರ ಬೆಂಬಲವೂ ಕನ್ನಡಿಗರ ಪ್ರೋತ್ಸಾಹವೂ ಯಥೇಷ್ಟ ದೊರೆತು 'ಮಾಲೆ'ಯು ನಮ್ಮ ಜಿಲ್ಲೆಗೇ ಭೂಷಣಪ್ರಾಯವಾಗುವಂತೆ ಬೆಳೆದು ಬರಲೆಂದು ಹಾರೈಸುವೆವು.

—ಸ್ವದೇಶಿ ಪ್ರಚಾರಕ.

## ಮಧುವನ (ಕಥಾಸಂಗ್ರಹ) ಬೆಲೆ ೧—೮—೦

**ಕತೆಗಳು ೨೫] ಮಧುವಿಗಿಂತ ಮಧುರ [೨೫೬ ಪುಟಗಳು**

ಕತೆಗಳೊಂದಿಗೆ ಕತೆಗಾರರ ಪರಿಚಯಗಳಿವೆ, ಪಡಿಯಚ್ಚುಗಳಿವೆ.

(ಬೊಂಬಾಯಿ, ಮೈಸೂರು ಟೆಕ್ಸ್ ಬುಕ್ ಕಮಿಟಿಗಳಿಂದ ಮಂಜೂರಾಗಿದೆ.)

'ಮಧುವನ'ವೆಂಬ ಕಥಾಸಂಗ್ರಹವನ್ನು ನಾನು ಓದಿ ನೋಡಿದ್ದೇನೆ. 'ನವಿಲುಗರಿ' 'ಕಾಮನ ಬಿಲ್ಲು' ಎಂಬ ಸಂಗ್ರಹಗಳು ಹೊರಟರೂ ಅಲ್ಲಿ ಕಾಣಬಾರದ ಹೆಸರುಗಳು ಕೆಲವು ಮಧುವನದಲ್ಲಿ ನಮಗೆ ಪರಿಚಿತವಾಗಿ ನಿಲ್ಲುತ್ತವೆ. 'ಮಧುವನ'ದ ಸಂಪಾದಕರ ಕೆಲಸವು ಸಣ್ಣದಲ್ಲ. ಹತ್ತು ಎಮ್ಮೆ ಹಾಲು ಕರೆದರೂ ಅದನ್ನು ಹೆಪ್ಪು ಹಾಕುವ ಹೊಣೆಯು ಅವರದಾಗಿದೆ. ಇದನ್ನು ಅವರು ಎಲ್ಲರೂ ಒಪ್ಪುವಂತೆ ಕೊನೆಗಾಣಿಸಿದ್ದಾರೆ. ಲೇಖಕ ಲೇಖಿಕೆಯರ ಭಾವಚಿತ್ರಗಳು, ಅವರ ಕೃತಿಗಳ ವಿಷಯದಲ್ಲಿ ಬರೆದ ವಿಮರ್ಶಾತ್ಮಕ ಟಿಪ್ಪಣಿಗಳು ಇವೆಲ್ಲ ಕೂಡಿ ಈ ಪುಸ್ತಕಕ್ಕೆ ಸಹಜವಾಗಿರುವ ಸೊಬಗನ್ನು ಹೆಚ್ಚಿಸಿವೆ. ಕಲೆಯ ದೃಷ್ಟಿಯಿಂದ ಇದೊಂದು ಉಚ್ಚ ತರಗತಿಯ ಕಥಾ ಸಂಗ್ರಹವಾಗಿದೆ. ಕನ್ನಡ ನಾಡಿನ ಕತೆಗಾರರು ಇಂದು ಯಾವ ಸುಳಿವನ್ನು ಹಿಡಿದು ಸಾಗುತ್ತಿರುವರೆಂಬುದನ್ನು ಈ ಸಂಗ್ರಹದ ಮೇಲಿಂದ ಚೆನ್ನಾಗಿ ತಿಳಿದುಕೊಳ್ಳಬಹುದು. ಮನೋರಂಜನೆಯ ಸಾಧನವೆಂದು ಓದುವವರಿಗೆ ಇದೊಂದು ಅಮೌಲ್ಯವಾದ ಗ್ರಂಥ. ಮನೆ-ಮನೆಯಲ್ಲಿ ಇರಬೇಕಾದುದು.

ಪುಣೆ. ೨೭–೩–೩೬ —ವಿ. ಕೃ. ಗೋಕಾಕ,

BOOK REVIEW: **HINDU** DEC. 4th 1935.

**MADHUVANA:**—*Published by the* **Kiriyara Prapancha, Udipi, South Kanara.** PRICE RS. 1—8—0

The Kiriyara Prapancha has been doing its best to encourage young men of letters in Karnataka and has to its credit a number of useful publications. The present volume is a worthy addition to them. The book is a collection of about twenty five short stories written by different persons some of whom have already made their mark in the literary world. The stories are of absorbing interest. The printing and get up of the book is good.

'...ಕತೆಗಾರರಲ್ಲಿ ಬಹುಶ್ರುತರಾದ ಪಂಡಿತ ತಾರಾನಾಥರು, 'ಸವ್ಯಸಾಚಿಸಾಹಿತಿ'ಗಳಾದ ಶ್ರೀ. ಅ. ನ. ಕೃಷ್ಣರಾಯರು, ಸಫಲ ಕವಿಗಳಾದ ಶ್ರೀ. ಕಡೆಂಗೋಡ್ಲು ಶಂಕರಭಟ್ಟರು, ಪ್ರತಿಭಾಸಂಪನ್ನರಾದ ಶ್ರೀ. ಶಿವರಾಮ ಕಾರಂತರು, ಹಿರಿಯರಾದ ಶ್ರೀ. ಎ. ಎನ್. ಕಾಮತರು, ಕಿರಿಯ ಕತೆಗಾರರಲ್ಲಿ ಚತುರರಾದ ಕುಡ್ವಿ ವಾಸುದೇವ ಶೆಣೈಯವರು, ಸಾಹಿತ್ಯಲೋಕದಲ್ಲಿ 'ಹೊಯಿಸಳ' ಎಂದು ಹೆಸರಾದ ಶ್ರೀ. ಆರ್ಗನ್ ಲಕ್ಷ್ಮಣರಾಯರು, ನವಯುಗ ಸಂಪಾದಕರಾದ ಶ್ರೀ. ಕೆ. ಕೆ. ಶೆಟ್ಟಿ, 'ವ್ಯಂಗ್ಯವಿನೋದಿ'ಗಳೆನಿಸಿರುವ ಶ್ರೀ. ಮಂಗಳೂರು ಜಾರಪ್ಪ ಮುಂತಾದ ವಾಚಕರಿಗೆ ಪರಿಚಿತರಾದ ಹಲವರಿರುವರು. ಈ ಸಂಗ್ರಹಕಾರ್ಯದಲ್ಲಿ ಸಂಪಾದಕರು ಕೈಕೊಂಡ ಸಾಹಸ ಸ್ತುತ್ಯವಾಗಿದೆ: ಗದ್ಯಸಾಹಿತ್ಯವು ಒಂದು ವಿಧವಾಗಿ ರೂಪುಗೊಳ್ಳುತ್ತಿರುವ ಈ ಕಾಲದಲ್ಲಿ ಇಂತಹ ಸಂಗ್ರಹವು ಸಾಹಿತ್ಯದ ಪುರೋಗತಿಯ ಗುರುತಿನ ಪತಾಕೆ ಎಂದರೂ ಎನ್ನಬಹುದು. —ಪ್ರಭಾತ.

'...ಇದು ಕರ್ನಾಟಕ ಪ್ರಾಂತದ ಬೇರೆ ಬೇರೆ ಪ್ರಾಂತದವರಿಂದ ಬರೆಯಲ್ಪಟ್ಟ ೨೫ ಕಥೆಗಳನ್ನೊಳಗೊಂಡ ಪುಸ್ತಕ. ಈ ವಿಷಯದಲ್ಲಿ ದೀರ್ಘಪ್ರಯತ್ನವನ್ನು ಕೈಕೊಂಡ ಉಡುಪಿಯ ಕಿರಿಯರ ಪ್ರಪಂಚದ ಚಾಲಕರನ್ನು ಅಭಿವಂದಿಸುತ್ತೇವೆ ...ಪುಸ್ತಕದ ಹೆಸರು ಮನೋಹರವಾಗಿದೆ. —ರಾಷ್ಟ್ರಬಂಧು.

'ಮಧುವನ' ಎಂಬ ಸೊಗಸಾದ ಕಥಾಸಂಗ್ರಹವು ಉಡುಪಿಯ ಕಿರಿಯರ ಪ್ರಪಂಚದ ಹಿರಿದಾದ ಸಾಹಸದ ಮಧುರವಾದ ಹಣ್ಣು. ಕಣ್ ತಣಿಯುವ ಹೊರಮೈ, ಮನಮೋಹಿಸುವ ಅಂತರಂಗದೊಂದಿಗೆ ಮಧುವನವು ಹೊರಬಿದ್ದಿದೆ. ನಮ್ಮ ನಾಡಿನಲ್ಲಿ ಈ ಮೊದಲು ಅನೇಕ ಕಥಾ ಸಂಗ್ರಹಗಳು ಪ್ರಕಟವಾಗಿರಬಹುದು. ಆದರೆ ಕತೆಗಾರರ ಛಾಯಾ ಚಿತ್ರಗಳೊಂದಿಗೆ ಕಥಾಸಂಗ್ರಹವನ್ನು ಪ್ರಕಟಿಸಿ ಅಭಿನಂದನೀಯವಾದ ಕೆಲಸವನ್ನು ಮಾಡಿದ ಕೀರ್ತಿಯು 'ಪ್ರಪಂಚ'ಕ್ಕೆ ಸಲ್ಲುತ್ತದೆ. ಕನ್ನಡಕ್ಕಿಂತ ಎಷ್ಟೋ ಮುಂದುವರಿದ ಮರಾಠೀ ಭಾಷೆಯಲ್ಲಿಯೂ ಇಂತಹ ಸಾಹಸವನ್ನು ಇನ್ನೂ ಯಾರೂ ಕೈಕೊಂಡಿಲ್ಲ. ಈ ದೃಷ್ಟಿಯಿಂದ ಮುಂದಿನ ಸಂಗ್ರಾಹಕರಿಗೆ ಪ್ರಪಂಚವು ಮೇಲ್ಪಂಕ್ತಿಯನ್ನು ಹಾಕಿ ಕೊಟ್ಟಿರುವುದೆಂದು ಹೇಳಬಹುದು.

ಸಾಹಿತ್ಯವು ಜನಜೀವನದ ಪಡಿನೆಳಲೆಂದು ಸಾಮಾನ್ಯವಾಗಿ ಹೇಳುವ ವಾಡಿಕೆಯಿದೆ. ಇದನ್ನು ಪತ್ಯಕ್ಷೀಕರಿಸಬೇಕಾದರೆ 'ಮಧುವನ'ವನ್ನು ಓದಬೇಕು.

'ಕಾಮನ ಬಿಲ್ಲಿ'ಗಿಂತ 'ಮಧುವನ'ವು ಮೂರು ಸಂಗತಿಗಳಲ್ಲಿ ಮುಂದಡಿಯಿಟ್ಟಿದೆಯೆನ್ನಬಹುದು. ಮೊದಲನೇದಾಗಿ ಲೇಖಕರ ಭಾವಚಿತ್ರಗಳು ಕೊಡಲ್ಪಟ್ಟಿವೆ. ಎರಡನೇದಾಗಿ ಕತೆಗಾರರಂತೆ ಕತೆಗಾರ್ತಿಯರಿಗೂ ಎಡೆಕೊಡಲ್ಪಟ್ಟಿದೆ. ಮೂರನೆಯದಾಗಿ ಈ ಮೊದಲು ಪ್ರಕಟವಾಗದ ಕತೆಗಳು ಸೇರಿಸಲ್ಪಟ್ಟಿವೆ......೨೫ ಭಾವಚಿತ್ರಗಳುಳ್ಳ ೨೫೬ ಪುಟಗಳ ಈ ಗ್ರಂಥಕ್ಕೆ ೧|| ರೂ. ಬೆಲೆ ತೀರ ಕಡಿಮೆಯೆಂದೇ ಹೇಳಬೇಕು.

—'ಭಾರತಿ'ಯಲ್ಲಿ ಹನುಮಂತರಾವ್ ಮಾಂಜರೇಕರ, B. A.

'ಪುಸ್ತಕವನ್ನು ಇಷ್ಟೊಂದು ಸುಂದರವಾಗಿ ಪ್ರಕಟಿಸಿ ವಾಙ್ಮಯ ಸೇವಾಬದ್ಧರಾದುದಕ್ಕೆ ನಮ್ಮ ಹೃತ್ಪೂರ್ವಕ ಅಭಿವಂದನೆಗಳಿವೆ. ಈ ಕೃತಿಗೆ ಪಠ್ಯಪುಸ್ತಕ ಸಮಿತಿಯವರ ಮತ್ತು ಸಾರ್ವಜನಿಕರ ಬೆಂಬಲವು ದೊರೆತು ಮಧುವನದ ಮಧುವಿನ ಮಾಧುರ್ಯವೆಷ್ಟೆಂಬುದು ಪ್ರತಿಯೊಬ್ಬ ಕನ್ನಡಿಗನು ತಿಳಿಯುವಂತಾಗಲೆಂದು ಹಾರೈಸುತ್ತೇವೆ.' —ಬಡವರ ಬಂಧು.

'...ಆದರ್ಶ ರೀತಿಯಲ್ಲಿ ಪ್ರಕಟಿಸಲ್ಪಟ್ಟ ಕತೆಗಳ ಸಂಗ್ರಹವು ಇದೇ ಮೊದಲಿನದ್ದೆಂತ ಹೇಳಿದರೆ ಅತಿಶಯೋಕ್ತಿಯಾಗಲಾರದು.' —ಕಂಠೀರವ.

'...ಸಂಪಾದಕರು ಕನ್ನಡ ಸಾಹಿತ್ಯಸೇವೆಯಲ್ಲಿ ಉತ್ಸಾಹಿಗಳು. ಇವರು ಪ್ರಕಟನ ಕಾರ್ಯದಲ್ಲಿ ವಿಶೇಷ ಶ್ರಮವಹಿಸಿದ್ದಾರೆ. —ಪ್ರಬುದ್ಧ ಕರ್ನಾಟಕ.

**MADHUVANA,** *Published by the Kiriyara Prapancha Udipi*, Price Rs. 1—8—0. De Lux Edition Rs. 2/-

Kiriyara Prapancha requires no introduction to the Kannada Public. In the world of letters, it has well-nigh become a national institution. The book under review is a collection of 25 stories by various authors (and authoresses) beautifully illustrated with the portraits of the writers. They describe with an intensity of feeling that can only be the result of the inward convictions of their writers, the blazing social and economic injustices that exist in present day Indian Society. The stories are simply told without any effort to produce effect! Kannada literature is decidedly the richer for this book.

FINANCIA EXPERTUS

## ವ್ಯಭಿಚಾರಿಣಿ ಯಾರು? (ಸಾಮಾಜಿಕ ನಾಟಕ) ಬೆಲೆ ೦—೮—೦

ಚಿತ್ರ ಮತ್ತು ಪದ್ಯಾವಳಿಯಿಂದೊಡಗೂಡಿದೆ.

ತಾರುಣ್ಯದುಬ್ಬಿನಿಂದಾದ ಒಂದು ಕ್ಷಣದ ಅವಿವೇಕವನ್ನೇ ಸಮಾಜವು ಪರ್ವತೀಕರಿಸಿ ಓರ್ವಸ್ತ್ರೀಯು ಎಷ್ಟೊಂದು ನಿರ್ದುಷ್ಟಳೂ ನಿಷ್ಕಳಂಕಳೂ ಆದರೂ ಅವಳನ್ನು ಹೇಗೆ ಬಹಿಷ್ಕರಿಸಿ ದೂರೀಕರಿಸುತ್ತದೆ? ಮತ್ತು ಮಾನವಂತತನದ ಸೋಗಿನಿಂದ ನಡೆಸಲ್ಪಡುವ ಅನಾಚಾರವನ್ನು ಹೇಗೆ ಕಡೆಗಣಿಸುತ್ತದೆ? ಎಂಬುದನ್ನು ಹೃದಯಭೇದಕವಾಗಿ ಚಿತ್ರಿಸುವ ವಿಚಾರಕ್ರಾಂತಿಕಾರಕ ನಾಟಕವಿದು. ಪವಿತ್ರಪ್ರೇಮವು ಎಂತಹ ಅಪಮಾನ, ನಿಂದೆ, ಕಠಿಣ ಪರೀಕ್ಷೆಗೊಳಗಾದರೂ ಕಟ್ಟಕಡೆಗೆ ಅದರ ವಿಜಯವು ನಿಶ್ಚಯವೆಂಬುದನ್ನು ಮನಗಾಣಿಸುವ ನವೀನ ನಾಟಕ.

ಉಡುಪಿ, ಮಂಗಳೂರು, ಬೊಂಬಾಯಿ, ಕಾರವಾರ ಮೊದಲಾದ ಕಡೆಗಳಲ್ಲಿ ಜಯಶೀಲವಾಗಿ ಅಭಿನಯಿಸಲ್ಪಟ್ಟ ಜನಪ್ರಿಯವಾದ ನಾಟಕ.

## ಪುರುಷವಧು! (ಏಕಾಂಕ ಪ್ರಹಸನ) ಬೆಲೆ ೦—೪—೦

ಮುದುಕನ ಮದುವೆಯ ಭ್ರಾಂತಿಯನ್ನು ಉಚ್ಚಾಟಣೆಮಾಡಲು ನವಸುಧಾರಕ ತರುಣರು ಕೆಲವರು ಹೂಡುವ ಹಂಚಿಕೆಯನ್ನು ಚಿತ್ರಿಸುವ ಅತ್ಯಂತ ಮನೋರಂಜಕ ಪ್ರಹಸನ. ಸ್ಕೂಲ್‌ಡೇ ಸಮಾಜಕೂಟ ಮೊದಲಾದ ಸಂದರ್ಭಗಳಲ್ಲಿ ಅಭಿನಯಿಸಲು ಅತ್ಯುಪಯುಕ್ತವಾಗಿದೆ.

'...ಪ್ರಹಸನಕ್ಕೆ ಬೇಕೆಷ್ಟು ನಗುವೆಬ್ಬಿಸುವ ಸ್ವಾರಸ್ಯದ ಮಾತುಗಳು ಆದ್ಯಂತದ ವರೆಗೂ ನಡುನಡುವೆ ಬರುತ್ತಿರುವುದರಿಂದ ವಾಚಕರಾಗಲೀ ಪ್ರೇಕ್ಷಕರಾಗಲೀ ಬಿಟ್ಟೇಳಲಾರರು...... ಹೇಳುವ ರೀತಿಯಲ್ಲಿ, ದೃಶ್ಯ ಸೃಷ್ಟಣೆಯಲ್ಲಿ ಸಹಜವೂ ಸ್ವಾರಸ್ಯವೂ ಚಮತ್ಕಾರವೂ ಇವೆ...... ಸಂತೋಷದ ಕೂಟಗಳಲ್ಲಿ ಅಭಿನಯಿಸಿದರೆ ಆನಂದಾತಿರೇಕ ಹೊಂದುವುದರಲ್ಲಿ ಸಂದೇಹವಿಲ್ಲ.'

—ಕೊ. ಶ್ರಿ. ರಾ.

## ಹೆಂಡ್ತಿ ಗಂಡನಾದರೆ? (ಏಕಾಂಕ ನಾಟಕ) ಬೆಲೆ ೦—೪—೦

ಸಾಂಪತ್ತಿಕ ಸ್ವಾತಂತ್ರ್ಯವುಳ್ಳ ಗಂಡನೊಬ್ಬನು ಅವನನ್ನು ಅವಲಂಬಿಸಿರುವ ಹೆಂಡತಿಯನ್ನು ಯಾವ ರೀತಿಯಲ್ಲಿ ಕಾಣುತ್ತಾನೋ ಅದೇ ರೀತಿಯಲ್ಲಿ ಸಾಂಪತ್ತಿಕ ಸ್ವಾತಂತ್ರ್ಯವನ್ನು ಪಡೆದಿರುವ ಹೆಂಡತಿಯು ತನ್ನನ್ನು ಹೊಂದಿರುವ ಗಂಡನನ್ನು ಕಂಡಲ್ಲಿ ಹೇಗಾಗುವುದು ಎಂಬುದನ್ನು ಮನಗಾಣಿಸಿ ಸ್ತ್ರೀ ಸ್ವಾತಂತ್ರ್ಯವನ್ನು ಮಾರ್ಮಿಕವಾಗಿ ಪ್ರತಿಪಾದಿಸುವ ಬೋಧಪರವೂ ವಿಚಾರಪರವೂ ವಿನೋದಪರವೂ ಆದ ಪ್ರಹಸನ. ಸ್ಕೂಲ್‌ಡೇ, ಸಮಾಜಕೂಟಾದಿ ಸಂದರ್ಭಗಳಲ್ಲಿ ಅಭಿನಯಿಸಲು ಯೋಗ್ಯವಾದ ನಾಟಕ.

'...ಶ್ರೀ. ಕೆ. ಕೆ. ಶೆಟ್ಟರು ಪ್ರೇಕ್ಷಕರನ್ನಾಗಲೀ ವಾಚಕರನ್ನಾಗಲೀ ನಗುನಗಿಸಿ ವಿಚಾರದ ಸೆಳತಕ್ಕೆ ಮುಟ್ಟಿಸಿಬಿಡುವ ಈ ಸಾಮಾಜಿಕ ಪ್ರಹಸನವನ್ನು ಬರೆದು ಬರಹಗಾರರಿಗೊಂದು ದಾರಿ ತೋರಿರುವುದು ತುಂಬಾ ಸಂತೋಷ. ಈ ಪ್ರಹಸನದಲ್ಲೆಲ್ಲಾ ಘನಹಾಸ್ಯವು ಗುಪ್ತವಾಗಿಯೂ, ವ್ಯಕ್ತವಾಗಿಯೂ ಹರಿಯುತ್ತಲಿದೆ, ವಿಚಾರವು ಎರಕವಾಗಿದೆ. ಮಾತುಗಳು ಪಾತ್ರ ಸನ್ನಿವೇಶಗಳ

ಭಾವಕ್ಕೆ ಸಹಜ ಹಾಗೂ ಸ್ವಾರಸ್ಯವೆನಿಸುವಂತಹವು. ಹಲವು ಸ್ವಾರಸ್ಯದ ಹಾಗೂ ಮಾ
ಸನ್ನಿವೇಶಗಳಿಂದ ಪ್ರತಿಯೊಂದು ಪುಟವೂ ತುಂಬಿ ತುಳುಕುತ್ತಿರುವ ಈ ಪ್ರಹಸನದ ಸ್ವಾ
ವನ್ನು ಓದಿಯೇ ತಿಳಿಯಬೇಕು. ಅಭಿನಯಿಸಿದರೆಂತೂ ನಕ್ಕು ನಕ್ಕು ಕಣ್ಣೀರುಬರಬ
ನೋಡಿದವರಿಗೆಲ್ಲ. ಬರೇ ಹುಚ್ಚಾಟದ ನಗುವಲ್ಲ. ನಕ್ಕಂತೆ ವಿಚಾರದ ತೆರೆ ಏಳುತ್ತದೆ

S. R. Kor

## ಮುಂದಿನ ದೇವರು (ಕ್ರಾಂತಿಕಾರಕ ಪ್ರಬಂಧ) ಬೆಲೆ ೦—೨—

ಪುರಾತನ ಸಮಾಜದ ವ್ಯವಸ್ಥೆ ಹೇಗಿತ್ತು? ಇಂದಿನದು ಯಾವ ರೀತಿಯಲ್ಲಿದೆ? ಮುಂದೆ ಹೇ
ಬೇಕು? ಎಂಬುದನ್ನು ವಿಚಾರಪೂರ್ಣವಾಗಿಯೂ ಸಂಕ್ಷೇಪವಾಗಿಯೂ ವಿವರಿಸುವ ಪ್ರಬಂ

"ಜೀವನದ ಎಲ್ಲಾ ಕ್ಷೇತ್ರಗಳಲ್ಲಿಯೂ ಈಗ ವಿಸ್ಮಯಕರ ಮಾರ್ಪಾಟಗಳುಂಟಾಗು
ವಾಗ ಇಂಥಾ ಹೊಸಹುರುಪಿನ ಹೊಸ ದೃಷ್ಟಿಯ ಹೊಸ ಪುಸ್ತಕಗಳು ಹೊರಬರುವುದು ಅ
ವಶ್ಯಕ.

—'ಕಂಠೀ

## ಸನ್ಯಾಸಿಯ ಸೋಗಿನಲ್ಲಿ (ಸಾಮಾಜಿಕ ಕಾದಂಬರಿ) ೦—೮—

ವೇಶ್ಯಾಪುತ್ರಿಯಾದರೂ ನೀತಿವಂತ ಜೀವನ ನಡೆಸುವ ಮನಸ್ಸುಳ್ಳವಳಾದರೆ ಸಮಾ
ಅದಕ್ಕೆ ಹೇಗೆ ಅಡ್ಡಿಮಾಡಿ ಅವಳ ಜೀವನವನ್ನು ಕೆಡಿಸಲು ಕಾರಣವಾಗುವುದೆಂಬುದ
ಹೃದ್ರಾವಕವಾಗಿ ಚಿತ್ರಿಸಿರುವ ನವೀನ ಸಾಮಾಜಿಕ ಕಾದಂಬರಿಯಿದು.

ಯಾವನು ಧರ್ಮಾಧಿಕಾರಿಯಾಗಿ, ಸರ್ವಬಿಟ್ಟ ಸನ್ಯಾಸಿಯಾಗಿ, ಸಮಾಜದ ನೀತಿನಿಯ
ಪಾಲನಾಕರ್ತನಿರುವನೋ ಅವನೇ ಅತ್ಯಾಚಾರಿಯಾಗಿ, ತನ್ನ ಅಧಿಕಾರ ಬಲದಿಂದ ನಿದೋ
ಅಬಲೆಯೊಬ್ಬಳ ಜೀವನ ಸುಖವನ್ನೇ ಮಣ್ಣುಗೂಡಿಸುವ ಚಿತ್ರವನ್ನು ಕಣ್ಣಮುಂದಿರಿಸಿ ಹೃದ
ವನ್ನು ಕರಗಿಸಿ ಕಂಬನಿ ತುಂಬಿಸುವ ವಿಷಾದಾಂತ ಕಾದಂಬರಿ. ಈಗಿನ ಸನ್ಯಾಸಿಗಳ ಅಂತರ
ವನ್ನು ತಿಳಿಯಬೇಕಾದರೆ ಈ ಪುಸ್ತಕದ ಅಂತರಂಗವನ್ನೇ ನೋಡಬೇಕು. ಒಳಗಿನ ಗುಟ್ಟ
ತಿಳಿಯಬೇಕಾದರೆ ಈ ಪುಸ್ತಕವನ್ನೇ ಹೊಕ್ಕಿ ನೋಡಬೇಕು.

---

## ಇತರ ಪುಸ್ತಕಗಳು

ಅಡ್ಡಬೆಳೆದ ಗಿಡ್ಡಿಯ ಮದುವೆ (ಕತೆ) ೦ ೧ ೦
ಮುದುಕನ ಹೆಂಡ್ತಿ ಥಕಥೈರಾಥೆ (ಕತೆ) ೦ ೧ ೦
ಬಾಲವಾಙ್ಮಯ (ವಿಚಾರಪೂರ್ಣ ಪ್ರಬಂಧ) ೦ ೩ ೦
ಆರೋಗ್ಯ ಪ್ರತಾಪ (ನಾಟಕ) ೦ ೮ ೦
ಆನಂದ ಅಥವಾ ಮನೆಯ ಅಳಿಯ (ಕಾದಂಬರಿ) ೦ ೮ ೦

ವತ್ಸಲಾ (ಸಾಮಾಜಿಕ ಕಾದಂಬರಿ) ೦
ಅಳಬೇಕೋ ನಗಬೇಕೋ? (ಕತೆ) ೦
ಮುದ್ರಾಡಿ ಮುದ್ದಣ (ಕತೆ) ೦
ಶಾಂತಿಪುರಾಣ (ಪೊನ್ನಕವಿ) ೩
ಪುರಂದರದಾಸರ ಕೀರ್ತನೆಗಳು (೪ ಭಾಗಗಳಲ್ಲಿ, ಪ್ರತಿ ಭಾಗಕ್ಕೆ) ೦
ಕಾಂಗ್ರೆಸಿನ ಇತಿಹಾಸ ೨
ಸರಸ್ವತಿ (ನಾಟಕ) ೦ ೮

